# 'ಪ್ರಸಂಗ' ಪರಿಚಯ

'ಸ್ವರಾಜ್ಯ ವಿಜಯ' ಯಕ್ಷಗಾನ 'ಪದಾರ್ಥ'ವನ್ನು ಮುಂದಿಡುವಾಗ ಎರಡು ಮಾತುಗಳನ್ನು ಆಡಲೇ ಬೇಕಾಗುತ್ತದೆ. ಮುನ್ನಾತಿನ ಸಂಪ್ರದಾಯವುಂಟೆಂದಲ್ಲ; ಅದಿಲ್ಲದಿರುತಿದ್ದರೂ ಇಂತಹ ಪ್ರಸಂಗದ ಮಟ್ಟಿಗೆ ಏನಾದರೂ ಹೇಳಿಕೊಳ್ಳಲೇ ಬೇಕಾಗುತಿತ್ತು.

ನಮ್ಮ ಯಕ್ಷಗಾನದಲ್ಲಿರುವ ಕಥೆಗಳು ನಮ್ಮ ದೇವಳಗಳಲ್ಲಿರುವ ಮೂರ್ತಿಗಳ ಕಾಲದವುಗಳೇ–ಕೃತ, ತ್ರೇತ, ದ್ವಾಪರಾಯುಗದವುಗಳು. ರಾಮ, ಕೃಷ್ಣ, ಹನುಮ, ಭೀಮ, ಸೀತೆ, ದ್ರೌಪದಿ, ರಾವಣ, ಶಿಶುಪಾಲ, ಕೌರವ, ಶೂರ್ಪನಖಿ, ಪೂತನಿಯರ ನಂತರದ ಯಾರನ್ನೇ ಆದರೂ ತಮ್ಮಲ್ಲಿ ಆವಾಹನೆಮಾಡಿಕೊಂಡ ಅನುಭವವು ಪ್ರಾಯಶಃ ನಮ್ಮ ಯಕ್ಷಗಾನ ಅರ್ಥಧಾರಿಗಳಿಗಾಗಲೀ, ವೇಷಧಾರಿಗಳಿಗಾಗಲೀ ಇಲ್ಲ. 'ಭೀಷ್ಮವಿಜಯ', 'ಕುಮಾರ ವಿಜಯ' ಅಶ್ವಮೇಧ ವಿಜಯಾನಂತರದ ಯಾವ ವಿಜಯವನ್ನೂ ಅವರು ಬಹುಶಃ ಪಡೆದಿಲ್ಲ. ಇದು 'ಸ್ವರಾಜ್ಯ ವಿಜಯ'. ಗಾಂಧೀ ಮೂರ್ತಿಗೊಂದು ದೇವಸ್ಥಾನ ಕಟ್ಟಿಸಿದ ಓರ್ವ ಮಹನೀಯನ ಹುಚ್ಚನ್ನು ಪತ್ರಿಕೆಗಳಲ್ಲಿ ಓದಿದ್ದ ಕೆಲವರು ಇಲ್ಲಿ ಅಂತಹ ಮತ್ತೊಂದು ಹುಚ್ಚನ್ನು ಕಂಡಂತೆ ಕನಿಕರ ಅಥವಾ ವಿನೋದಗೊಳ್ಳಬಹುದು; ಈ ಮೂಲಕ ಯಕ್ಷಗಾನದ ಪಾವಿತ್ರ್ಯ ಭಂಗವಾಯಿತು ಎಂದು ಆರೋಪಿಸುವವರಿರಬಹುದು; ಇದೊಂದು ಅಣಕಾಟವಲ್ಲವೇ ಎಂದು ಶಂಕಿಸುವವರು ಬಹಳವಿರಬಹುದು.

ಇದು ಯಕ್ಷಗಾನ ಕಲಾ ಸೇವೆ ಹೊರತು ಬೇರಾವುದೂ ಅಲ್ಲ. ಯಕ್ಷಗಾನದ ಅಭಿರುಚಿ ಮತ್ತದರ ಮೇಲೆ ಆಸಕ್ತಿಯಿರದೆ ಈ ಕೆಲಸ ಮಾಡಲಾಗುವದಿಲ್ಲ. ಸಂಪ್ರದಾಯವಾದಿಗಳು ನೆನಸಿಕೊಂಡಷ್ಟು ಈ ಕಲೆ ಸಣ್ಣದಲ್ಲ. ಯಕ್ಷಗಾನದಲ್ಲಿ ಪುರಾಣದ ಕಥೆಗಳು ಮಾತ್ರ ಸೇರಿಕೊಳ್ಳಬಲ್ಲವು, ಇದು ಅದಕ್ಕೇನೇ ಮೀಸಲಿರಬೇಕು ಎಂದು ನಿರ್ಧರಿಸಿ ಕುಳಿತುಕೊಂಡರೆ ಈ ಕಲೆ ಅಷ್ಟಕ್ಕೇನೇ. ಕಾಶಿ ಗೋಕರ್ಣಗಳಿಂದ ರುದ್ರಾಕ್ಷಿಮಾಲೆ ತಂದೇ ತೊಟ್ಟುಕೊಳ್ಳಬೇಕೆಂಬ ವ್ರತಹಿಡಿದರೆ

ಕಂಠವೂ ಅಷ್ಟಕ್ಕೇ ತಾನೆ? ಆದರೆ ತೊಡಿಸಿದಲ್ಲಿ ಕಂಠಕ್ಕೆ ಸುವರ್ಣಹಾರ ಪುಷ್ಪಹಾರಗಳೂ ಶೋಭಿಸುತ್ತವೆ; ಕಲೆಗೆ 'ಸ್ವರಾಜ್ಯ ವಿಜಯ' ದಂತಹ ಪ್ರಚಲಿತ ಪ್ರಸಂಗಗಳೂ ಹಿಡಿಯುತ್ತವೆ. ರುದ್ರಾಕ್ಷಿಹಾರ ಧರಿಸುವ ಭಾವನೆಯಲ್ಲೇ ಸುವರ್ಣಹಾರ ಅಥವಾ ಪುಷ್ಪಹಾರ ಧರಿಸುವದಲ್ಲವೇನೊ ನಿಜ. ಆದರೆ ಈ ಕಾಲ ಹೇಗಿದೆ? ಅಂದ ಮೇಲೆ ಈ 'ಪ್ರಸಂಗ'ದಲ್ಲಿ ಅಂತಹ ಅಸಹಜತೆಯೇನಿದೆ?

ಯಕ್ಷಗಾನದಲ್ಲಿರುವ ನಮ್ಮ ಪುರಾಣ ಕಥೆಗಳೆಲ್ಲವೂ ಆಗಿನ ರಾಜಕೀಯಗಳೇ ಹೊರತು ಬೇರಲ್ಲ. ಆ ಕಾಲದ ಮತ್ತೀ ಕಾಲದ ಶಸ್ತ್ರೋಪಕರಣಗಳಂತೆಯೇ ರಾಜಕಾರಣಿಗಳ ಮನೋಧರ್ಮ, ವ್ಯವಹಾರ ಕ್ರಮ, ರೀತಿನೀತಿಗಳಲ್ಲಿ ಕೂಡಾ ನಿಕಟಸಾಮ್ಯತೆ ಕಂಡುಬರುತ್ತಿದೆ. ಅಂದಿನ ಮತ್ತಿಂದಿನ ರಾಜಕೀಯದಲ್ಲಿ ಮುಖ್ಯವಾಗಿರುವ ರಾಜಸ ಸ್ವಭಾವವನ್ನು ಪಡಿಮೂಡಿಸಲು ಯಕ್ಷಗಾನ ಕಲೆಯಲ್ಲಿರುವ ಅನುಕೂಲತೆ ಹೆಚ್ಚಿನದು. ಅಂದಮೇಲೆ ಯಕ್ಷಗಾನದಲ್ಲಿ ಇಂದಿನ ರಾಜಕೀಯ ಮೂಡಬಾರದೆಂದೇನು? ಆ ಯುಗಗಳ ಕಥೆಗಳು ಯಕ್ಷಗಾನದಲ್ಲಿರುವುದರಿಂದ ಈಗಿನವು ಅಲ್ಲಿರಬಾರದೆ? ಅಜ್ಜ ತೊಟ್ಟದ್ದನೆಂಬ ಕಾರಣದಿಂದಲೇ ಮನೆತನದ 'ಗೌರವಕಂಕಣ'ವನ್ನು ತೊಡಲು ಹಿಂಜರಿಯಬಹುದೇ? ಕೂಡದು. ಎಷ್ಟೋ ಹಳೇ ಯಕ್ಷಗಾನ'ಪ್ರಸಂಗ'ಗಳು ಹಿಂದಿನ ಯುಗಗಳ ರಾಜಕೀಯವನ್ನು ಕಣ್ಣಮುಂದೆ ತಂದಿದ್ದುವು, 'ಸ್ವರಾಜ್ಯ ವಿಜಯ'ವು ನಿನ್ನೆಯದನ್ನು ತಂದಿದೆ; ಮೊನ್ನೆಯದು, ನಾಳೆಯದು, ಸದಾಕಾಲದ್ದು ಯಕ್ಷಗಾನ ರೂಪದಿಂದ ಬರಲು ಸಾಧ್ಯವಿದೆ; ಇಂತಹದಿರಲೆಂದು ಜನ ಅಪೇಕ್ಷಿಸಿದರೆ, ಇದರ ಬೆನ್ನಲ್ಲೇ ಒಂದೊಂದಾಗಿ ಬರಲಿವೆ.

ನಮ್ಮ ಹಳ್ಳಿಗರು ಅರ್ಥ ಮಾಡಬಲ್ಲ, ಅನುಭವಿಸಬಲ್ಲ ಕಲೆ, ಸಾಹಿತ್ಯ, ಎಲ್ಲವೂ ಯಕ್ಷಗಾನವೊಂದೇ ಎಂಬುದನ್ನು ಇಲ್ಲಿ ವಿವರಿಸಬೇಕೆಂದಿಲ್ಲ. ಈಗ ಹೆಸರು ಹಾಕಿಕೊಂಡು ಮುಂದೆ ಬಂದಿರುವ 'ಜನತಾ ಸಾಹಿತ್ಯ'ಗಳು ಜನತೆಯವಾಗಿಲ್ಲ. ಅವುಗಳ ಅಂತರ್ಯ ಜನತೆಯದಿರಬಹುದು; ಆದರೆ 'ಭಾಷೆ' ಬರೆಹಗಾರನದ್ದೇ. ಆದ್ದರಿಂದ ಹಳ್ಳೀ ಜನತೆಗೆ ಅರ್ಥವಾಗುತ್ತಿಲ್ಲ. ನಿಜ, ತಮ್ಮ ವೇಷದಲ್ಲೇ ಇರ್ರದ

ತಮ್ಮ ಜನವನ್ನಾದರೂ ಗುರುತಿಸಲಾರದ ಸ್ಥಿತಿ ನಮ್ಮ ಹಳ್ಳಿಗರದು. ಈ 'ಸ್ವರಾಜ್ಯ ವಿಜಯ'ಕ್ಕೆ ಜನತಾ ಸಾಹಿತ್ಯವೆಂಬ ವರ್ಗನಾಮ ಕೊಡಲಡ್ಡಿಯಿಲ್ಲ ದಕ್ಷಿಣಕನ್ನಡ ಜಿಲ್ಲೆಯ ಮಟ್ಟಿಗೆ 'ಜನತಾ ಸಾಹಿತ್ಯ'ದ ಉದ್ದೇಶವು ಸಾಫಲ್ಯ ಹೊಂದಬೇಕು ಇಂತಹ ಸಾಹಿತ್ಯಗಳ ಮೂಲಕವೇ. ಹಳ್ಳಿಗಳ ಜನತೆಗೆ ರಾಷ್ಟ್ರದ ಈ ಜೀವಾಳಕ್ಕೆ–ಪ್ರಜಾ ರಾಜ್ಯದ ಬಹು ಸಂಖ್ಯಾಕರಾಗಿರುವ ಈ ವರ್ಗಕ್ಕೆ–ನಮ್ಮ ಇಂದಿನ ರಾಜಕೀಯದ ಒಳಸ್ವರೂಪವು ಗೋಚರಕ್ಕೆ ಬಂದಿಲ್ಲ. ಅವರಿಗೆ ಅರ್ಜುನನ ಗುಣ ನಡತೆಗಳ ಪರಿಚಯವಿರುವಷ್ಟು ನೆಹರೂ 'ಗುರುತಾರ್ಹ' ಇಲ್ಲ ಹಸ್ತಿನಾವತಿಯಾಗಿದ್ದಾಗ ಅಲ್ಲಿ ಏನು ನಡೆದಿದ್ದಿತೆಂಬುದು ಗೊತ್ತಿದ್ದಷ್ಟು ಅದು ಢಿಲ್ಲಿಯಾದ ಮೇಲೆ-ಈಗ-ಅಲ್ಲಿ ನಡೆದಿರುವ ವಿಷಯ ಹಳ್ಳಿಗರಿಗೆ ತಿಳಿದಿಲ್ಲ ಅಂಥವರಿಗೆ ಇಂದಿನ ರಾಜಕೀಯಗಳನ್ನು - ತಿಳಿಸಬೇಕು ಇಂತಹದರಿಂದಲೇ. ಈ ಮೂಲಕ ಕಲಾಸ್ವಾದನೆ, ಕಲಿಸುವಿಕೆ, ಎರಡೂ ಆಗುತ್ತವೆ; ಹಳ್ಳಿಗರು ಆನಂದ ಪಡೆಯುತಿದ್ದೇವೆ ಎಂದು ಕುಳಿತಲ್ಲಿಯೇ ಅನುಭವ ಪಡೆಯುತ್ತಾರೆ. ನಾಳೆಯೆಂತೂ ಆಳುವವರು ಅವರೇ. ಇಂತಹ ಹೊಸ ವಿಧಾನಗಳಿಂದಾದರೂ ಅವರು ರಾಜಕೀಯವನ್ನು ಕಲಿತು ತಯಾರಾಗುವದು ಅಗತ್ಯ.

ಇದು ಸ್ವರಾಜ್ಯದೊಂದಿಗೆ ಹುಟ್ಟಿದ ಕೃತಿ. ಅಪರೂಪದ ವಂಶ ಮೂಲವಾದ ಮಗುವಿಗಾಗಿಯೇ ಕಟ್ಟಿದ ಜೋಗುಳ. ಸ್ವರಾಜ್ಯಕ್ಕಾಗಿಯೇ-೧೯೪೭ನೇ ಅಗೋಸ್ತು ೧೫, ಈ ದಿನಕ್ಕಾಗಿಯೇ–ನಿರ್ಮಾಣಗೊಂಡಿದ್ದಿತು. ಅಗೋಸ್ತು 15 ಹಿಡಿಯುವ ಮಧ್ಯರಾತ್ರಿ ಮುಹೂರ್ತದವರೆಗಿನ ಸ್ವರಾಜ್ಯೋತ್ಸವಾಚರಣೆಯ ಕಾರ್ಯಕ್ರಮಕ್ಕಾಗಿ ಇದು ಬರೆಯಲ್ಪಟ್ಟದ್ದಿತು. ನಮ್ಮ 'ಗೆಳೆಯರ ಕೂಟ'ದವರ ಆಶ್ರಯದಲ್ಲಿ ತರುಣ ಮಿತ್ರಮಂಡಲಿಯಿಂದ ಆ ಚಿರಸ್ಮರಣಾರ್ಹ ತಾಸುಗಳಲ್ಲಿ ಉಡುಪಿಯಲ್ಲಿ ಇದು 'ತಾಳಮದ್ದಳೆ' ರೂಪದಿಂದ ಪ್ರಥಮತಃ ಪ್ರದರ್ಶಿಸಲ್ಪಟ್ಟಿತು; ಜನರನ್ನಾಕರ್ಷಿಸಿತು. ಆ ಮಿತ್ರರೆಲ್ಲರ ಸಹಕಾರವನ್ನೀ ಸಂದರ್ಭದಲ್ಲಿ ಸ್ಮರಿಸಬೇಕಾಗಿದೆ. ಆ ಮೇಲೆ ಬೇರೆಬೇರೆಡೆಗಳಲ್ಲಿ ಇದರ 'ಯಕ್ಷಗಾನ ಕಥಾ ಕಾಲಕ್ಷೇಪ' ನಡೆದಿದೆ; ಜನ ಮೆಚ್ಚುಗೆ

ಪಡೆದಿದೆ. ೧೯೪೭ ಆಗೋಸ್ತು ೧೫ರಲ್ಲಿ ಬಂದ ಸ್ವರಾಜ್ಯವು ತನ್ನೊಂದಿಗೆ ಸಣ್ಣ ದೊಡ್ಡ ಹಲವು ಹೊಸ ವಸ್ತುಗಳನ್ನು ತಂದಿದ್ದಿತು; ಇದೂ ಒಂದು.

ಕೂಲಿಗಾರ ಸರಕಾರವು ಹಿಂದೀ ಸಮಸ್ಯೆಯನ್ನು ತೀರ್ಮಾನಿಸ ಲಿಳಿದಂದಿನಿಂದ, ಭಾರತ-ಪಾಕಿಸ್ತಾನ ನಿರ್ಮಿಸಿ ಸ್ವರಾಜ್ಯ ದಾನ ಮಾಡಿದ ವರೆಗಿನ ಘಟನೆಗಳು ಈ 'ಪ್ರಸಂಗ'ದ ಕಥಾವಸ್ತು. ಪದ್ಯ ಹಾಡುವ 'ಭಾಗವತರು' ಪೂರ್ತಿ ನೂರುಬಾರಿ ಹಾಡುವಷ್ಟು ಪದ್ಯಗಳು ಇಲ್ಲಿವೆ. ಅಟ್ಲಿ, ಕ್ರಿಪ್ಸ್, ಅಲೆಕ್ಸಾಂಡರ್, ಪೆಥಿಕ್ ಲಾರೆನ್ಸ್, ಜಿನ್ನಾ, ನೆಹರು, ಪಟೇಲ್, ಗಾಂಧಿ, ಅಜಾದ್, ಕೃಪಲಾನಿ, ಜೈಪ್ರಕಾಶ್, ಮೌಂಟ್ ಬೇಟನ್, ಖಾನ್‌ನೂನ್, ನಿಸ್ತಾರ್, ಬಲದೇವಸಿಂಗ್, ಮುಂತಾದ ಈಗಿನ ಮುಖ್ಯಸ್ಥರೇ ಇದರಲ್ಲಿರುವ ಪಾತ್ರಗಳು. ಒಂದು ಸೊಲ್ಲು ಪದ್ಯ, ಕೆಳಗಡೆ ಅದಕ್ಕೆ ಅರ್ಥ ಹೇಳತಕ್ಕ ಪಾತ್ರಪ್ರತಿ ನಿಧಿಯ ಮಾತು, ಅನುಕ್ರಮವಾಗಿ ಬಂದಿವೆ 'ತಾಳಮದ್ದಳೆ ಕಾಲ ಕ್ಷೇಪ'ದ ಪ್ರಚಲಿತ ರೀತಿ ನೀತಿಗಳನ್ನೇ ಇಲ್ಲಿ ಆಧರಿಸಲಾಗಿದೆ; ಮಾತು ಗಳು ಯಕ್ಷಗಾನ ಅರ್ಥದ ಗಂಡು ಶೈಲಿಯಲ್ಲೇ ಬಂದಿವೆ. ಪದ್ಯಗಳಿಗೆ, ವಾಡಿಕೆಯ ಯಕ್ಷಗಾನ ಸೊಲ್ಲುಗಳನ್ನು ಉದಾಹರಿಸಿ ಧಾಟಿಯನ್ನು ತಿಳಿ ಸಲಾಗಿದೆ; 'ತಾಳ'ಗಳನ್ನು ಸೂಚಿಸಲಾಗಲಿಲ್ಲ. ಇಲ್ಲಿರುವಂತೆಯೇ 'ಪದಾರ್ಥ ಪಠನೆ'ಯೆಂದಾದರೆ ಇದು ಸುಮಾರು ಎರಡೂವರೆ ತಾಸುಗಳ ಕೆಲಸ. ನಮ್ಮ ಕಾಲಕ್ಷೇಪಗಳಲ್ಲಿ ಈಗ ವಾಡಿಕೆಯಲ್ಲಿರುವ ನುಡಿ ಸ್ವಾತಂತ್ರ್ಯವನ್ನು ಉಪಯೋಗಿಸಿ 'ಅರ್ಥ ಮಾತಾಡುವು'ದಾದರೆ ರಾತ್ರಿ ೯ ಘಂಟೆಗೆ ಕುಳಿತವರು ಸೂರ್ಯನೊಂದಿಗೇನೇ ಏಳಲು ಸಾಧ್ಯವಿದೆ. ಆದರೆ ಎಲ್ಲರೂ ಹಾಗೆ ಮಾಡಕೂಡದೆಂದೇ ಈಮಟ್ಟಿಗೊಂದು ತಡೆಬೀಳು ವುದು ವಾಸಿ. ಇದು ನಡೆದುಬಂದ ಕಥೆಯ ಬೆನ್ನು ಹಿಡಿದುಬಂದ ಕಲ್ಪನೆ: ಆಗೋಸ್ತು ೧೫ರಲ್ಲಿ ಅಸ್ತಿತ್ವಕ್ಕೆ ಬಂದ ವ್ಯವಸ್ಥೆಯು ಅನಿವಾರ್ಯವಾ ಗಿತ್ತು. ಅದರ ಪ್ರತಿಯೊಂದು ವ್ಯವಹಾರದಲ್ಲೂ, ಪ್ರತಿಯೊಬ್ಬನ ಮಾತು ವರ್ತನೆಗಳಲ್ಲೂ ಒಂದು ಗುರಿ, ಒಂದು ಧೋರಣೆ; ಒಂದು ತೂಕ ಇದ್ದೇ ಇದೆ ಎಲ್ಲರ ಭವಿಷ್ಯಕ್ಕಾಗಿ ಕೂಡಾ ಬದಲಾಯಿಸಲಾಗ

ದಿದ್ದ ಸ್ವರಾಜ್ಯ ವಹಿವಾಟುಗಳೊಳಗಿನ ಆ ನುಡಿನಡೆಗಳನ್ನು ನಾವೀ ಬರೆಹಕ್ಕಾಗಿ ಬದಲಾಯಿಸುವ ಅಪರಾಧ ಮಾಡಿಲ್ಲ. ಇಲ್ಲಿರುವ 'ಪದಾರ್ಥ'ಗಳೊಳಗಿನ ಭಾವಾರ್ಥಗಳೆಲ್ಲವೂ ಪ್ರತ್ಯಕ್ಷ ಅಲ್ಲಿದ್ದವುಗಳೇ. ಇದು ಕಲ್ಪನಾ ಕಥೆಯಲ್ಲ—ನಡೆದ ಸಂಗತಿಗಳ ವರದಿ; ಆಕಾರವೆಲ್ಲಿಯೂ ಕೆಡಬಾರದು, ಆದರೆ ಕಣ್ಣಿಟ್ಟು ನೋಡುವಂತಾಗಬೇಕು, ಎಂದು ಆಗ್ರಾದ ತಾಜಮಹಾಲಿನ ಅಂಗೈ ಅಗಲದ ರೂಪ ಕೆತ್ತಿದಂತೆ ಸ್ವರಾಜ್ಯ ಸ್ಥಾಪನಾಂದೋಲನದ ಪ್ರತಿಯೊಂದು ಮಾತು, ಘಟನೆಯನ್ನೂ ಜಾಗರೂಕತೆಯಿಂದ ಇಲ್ಲಿ ಚಿತ್ರಿಸಲಾಗಿದೆ. ಅರ್ಥ ಮಾತಾಡುವವರಿಗೆ ಇಲ್ಲಿಯ ಮಾತುಗಳು ಸಾಕಾಗಲಾರವೆಂದು ತೋರಿದರೆ, ಸಂಗತಿಯರಿತವರು ಎಷ್ಟೂ ಮಾತಾಡಬಹುದು. ಆದರೆ ಇಲ್ಲಿಯ ಮಾತುಗಳ ಸಾಲನ್ನು ಬಿಟ್ಟು ದೂರ ಹೋಗಬಾರದು; ಹಾಗೆ ಹೋದರೆ ಸತ್ಯವನ್ನೇ ಬಿಟ್ಟು ಹೋದಂತೆ. ಈ 'ಪ್ರಸಂಗ'ವನ್ನು 'ಬಯಲಾಟ'ವಾಗಿಯೂ 'ರಂಗಭೂಮಿ'ಯಲ್ಲೂ ಪ್ರದರ್ಶಿಸಲು ಸಾಧ್ಯವಿದೆ.

'ಸ್ವರಾಜ್ಯ ವಿಜಯ'ವನ್ನು ಈ ರೀತಿ ಪ್ರಕಾಶಗೊಳಿಸಿದ 'ಕಿರಿಯರ ಪ್ರಪಂಚ'ದ ವ್ಯವಸ್ಥಾಪಕರಿಗೆ ಕೃತಜ್ಞನಿದ್ದೇನೆ.

11—12—47 ಎಂ. ವಿ. ಹೆಗ್ಡೆ.

---

ಇದು ಎರಡನೆ ಬಾರಿ ಅಚ್ಚಾಗುವಂತೆ ನೆರವಾದ ವಾಚಕರ ಉಪಕಾರವನ್ನು ಸ್ಮರಿಸುತ್ತೇವೆ.

—ಪ್ರಕಾಶಕರು

15—8—1952

## ಸೂಚಿ:

# ಸ್ವರಾಜ್ಯ ವಿಜಯ

[ಪದ್ಯ:-ಧಾಟಿ -'ಬಂದನು ದೇವರ ದೇವಾ']

ವಂದೇ ಭಾರತ ಮಾತೆ। ಕುಂದದ ಸತ್ಕೀರ್ತಿಯುತೆ || ಗಾಂಧಿ ನೆಹರು ಜಗ। ವಂದ್ಯರ ಜನನಿ ಮ | ದಾಂಧರ ರಿಪು ಲೋ। ಕೇಂದು ಸುಶೋಭಿತೆ || ೧ ||

ಕಾಳಗದ ಅಂತ್ಯದಲಿ । ಕಾಲವು ತೀವ್ರತೆ ತಾಳಿ || ಮೇಲು ಕೀಳನು ಧನ। ಲಾಲಸೆ ಸ್ವಾರ್ಥಾಂ। ದೋಲನವೆಲ್ಲವ। ಮೂಲೆಗೆ ದೂಡಿತು || ೨ ||

ಟೋರಿಗಳ ಸರಕಾರ।ಜಾರಿತು ಕೂಲೀಗಾರ || ವೀರರು ಪೀಠವ। ನೇರಿದರಾಟ್ಲಿಯು | ಭಾರತದೊಗಟ ವಿ। ಚಾರಿಸಲೆದ್ದನು || ೩ ||

(ಆಟ್ಲಿ ಒಡ್ಡೋಲಗ—ಬ್ರಿಟಿಷ್ ಮಂತ್ರಿಮಂಡಲದ ಸಭೆ).

ಹಾಡುಗಾರ—ಮಹಾ ಮನುಷ್ಯರಿಗೆ ಸುಸ್ವಾಗತ.

ಆಟ್ಲಿ—ಆಗಲಿ; ಬಹಳ ಸಂತೋಷ.

ಹಾಡುಗಾರ - ತೇಜಃಪುಂಜರ ಪರಿಚಯ ತಿಳಿಯಬೇಕಾಗಿ ಬಂತಲ್ಲಾ!

ಆಟ್ಲಿ—ಬ್ರಿಟಿಷ್ ಸಾಮ್ರಾಜ್ಯಕ್ಕೀಗ ಯಾರೆಂದು ಗೊತ್ತು ತಾನೆ?

ಹಾಡುಗಾರ—ಕೂಲಿಗಾರ ಸರಕಾರದ ಪ್ರಧಾನ ಮಂತ್ರಿ ಕ್ಲೆಮೆಂಟ್ ಆಟ್ಲಿ ಸಾಹೇಬರು

ಆಟ್ಲಿ—ಹಾಗೆಂದು ಕೊಳ್ಳಿ.

ಹಾಡುಗಾರ—ಚಿತ್ತೈಸಿದ ಕಾರಣ?

ಆಟ್ಲಿ—ಇದೆ; ಪೀಠ ತಯಾರಿದೆಯಷ್ಟೆ?

(ಪದ್ಯ:-ಧಾಟಿ ಅರಸ ಕೇಳಿತ್ತಲು ಸುಯೋಧನ। ಕರೆಸಿ ಗರುಗಾಂಗೇಯು)

ಸೂರ್ಯ ಮುಳುಗದ ರಾಜ್ಯಲೋಕದ । ಶೌರ್ಯಮಣಿ ಸಾಮ್ರಾಜ್ಯ ಬ್ರಿಟನಿನ । ಕಾರ್ಯಭಾರಕೆ ಕೊನೆಯು ಬಂತನಿ । ವಾರ್ಯವಾಗಿ || ೧ ||

ಅಟ್ಲಿ—ಏನಿದು, ಕಾಲ ಮಹಾತ್ಮೆ! ಬ್ರಿಟಿಷ್ ಸಾಮ್ರಾಜ್ಯವೆಂಬುದು ಲೋಕದ ಅಗ್ರಗಣ್ಯ ಸಾಮ್ರಾಜ್ಯ; ಅಸಾಮಾನ್ಯ, ಅಂತ್ಯರಹಿತ, ಆಶ್ರಿತಭರಿತ ಸಾಮ್ರಾಜ್ಯ. ಸೂರ್ಯನು ಒಂದೆಡೆ ಅಸ್ತಮಿಸುವಾಗಲೇ ಮತ್ತೊಂದೆಡೆ ಮೂಡುವಷ್ಟು ಸರ್ವವ್ಯಾಪಿಯಾಗಿದ್ದ ಸಾಮ್ರಾಜ್ಯ ಸಿರಿ ಸಂಪತ್ತು, ಶೌರ್ಯ ಸಾಹಸಗಳಲ್ಲಿ ಇದಕ್ಕೆ ಸಾಟಿಯಾದುದು-ಇನ್ನೊಂದಿರಲಿಲ್ಲ ನಮ್ಮ ಯೂನಿಯನ್ ಜೇಕ್ ದ್ವಿತೀಯ ದಿನಮಣಿಯಂತೆ ಪ್ರಪಂಚದ ಗಗನದಲ್ಲಿ ಹಾರಾಡುತಿತ್ತು. ಬ್ರಿಟಿಷ್ ಸಾಮ್ರಾಟನ ಮುಕುಟ ಪ್ರಭೆಯು ಲೋಕದ ಎಂಟು ದಿಕ್ಕುಗಳಿಗೂ ಪ್ರಕಾಶ ಬೀರುತ್ತಿತ್ತು. ಆದರೆ ಕಂಡಿರಾ, ಮಂತ್ರಿವರ್ಯರೇ, ಇಂದು ಬಂದಿರುವ ದುರ್ದಶೆಯನ್ನು! ಬ್ರಿಟಿಷ್ ಸಾಮ್ರಾಜ್ಯದ ಕೊನೆಯ ದಿನಗಳನ್ನೇ ತುಂಬಿ ಕೊಂಡಿರುವ ಕಾಲವೀಗ ಕಣ್ಣಮುಂದಿದೆಯಲ್ಲಾ!

ಪದ್ಯ:—ಜಾಗತಿಕ ಮಹಯುದ್ಧವಹ್ನಿಯು । ಬೇಗೆಗೆಮ್ಮಯ ಸರ್ವಬಲ ಬಲಿ | ಯಾಗಿ ಕರಟಿತು ಲೋಕವಾಳುವ | ದಾಗದಿನ್ನು ||೨||

ಅಟ್ಲಿ—ಅಕಟಕಟಾ! ಹಿಟ್ಲರ್, ಮುಸಲನಿ, ಟೋಜೋ ಫೇಸಿಸ್ಟ ತ್ರಿಮೂರ್ತಿಗಳು ಹತ್ತಿಸಿದ ಎರಡನೇ ಲೋಕ ಮಹಾಯುದ್ಧವೆಂಬ ಯಜ್ಞಕುಂಡದಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಸರ್ವಶಕ್ತಿ ಸಂಪತ್ತುಗಳೂ ಆಹುತಿಯಾಗಿ ಲಯವಾಗಿವೆ. ನಾವಿಂದು ನಿಶ್ಶಕ್ತರಾಗಿದ್ದೇವೆ; ನಿಸ್ತೇಜರಾಗಿದ್ದೇವೆ. ಲೋಕದ ನಮ್ಮ ಅಧೀನ ರಾಷ್ಟ್ರಗಳನ್ನು ಇನ್ನು ಅಂಕೆಯಲ್ಲಿಟ್ಟುಕೊಳ್ಳುವುದು ಅಸಾಧ್ಯವೇ ಸರಿ. ಇನ್ನೇನು ಗತಿ!

ಪದ್ಯ:—ತಂತ್ರ ಫಲಿಸದು ಧೀರ ಗಾಂಧಿಯ । ಮಂತ್ರ ಬಲದಲಿ ಭರತ ರಾಷ್ಟ್ರ ಸ್ವ। ತಂತ್ರ ಸಮರವ ಹೂಡುತಿರುವದು । ಪಂಥ ಬಿಡದೆ ॥ ೩ ||

ಅಟ್ಲಿ—ಅಕಟಕಟಾ! ಬ್ರಿಟಿಷ್ ಸಾಮ್ರಾಜ್ಯದ ಮುಖ್ಯಾಂಗವಾಗಿರುವ ಭಾರತದಲ್ಲಂತೂ ಮಿಸ್ಟರ್ ಗಾಂಧಿಯ ಅಜೇಯ ತತ್ವಗಳ ಬಲದಿಂದ ದುರ್ದಮನೀಯ ಸ್ವಾತಂತ್ರ್ಯ ಹೋರಾಟವೇ ನಡೆದಿದೆ. ನಮ್ಮ ಬಲ, ತಂತ್ರ ಪ್ರಯೋಗಗಳೆಲ್ಲವೂ ಅದರಿದಿರಲ್ಲಿ ನಿಷ್ಫಲವಾಗಿವೆ. ಹಾ! ಕಾಲಮಹಿಮೆಯೇ! ಇಂಗ್ಲಾಂಡಿನ ಅನ್ನಕೋಶ ಹಿಂದುಸ್ಥಾನವೇ ಈಗ

ಸುಡುತ್ತಿದೆ; ಬ್ರಿಟಿಷ್ ಸಾಮ್ರಾಟ ಕಿರೀಟದ ಕೊಹಿನೂರು, ಉಜ್ವಲ ರತ್ನ, ಭಾರತವೀಗ ಉದುರಿಬೀಳುವುದರಲ್ಲಿದೆ. ಕಳೆಯಿತು; ಸಾಮ್ರಾಜ್ಯದ ಕಾಲವೆಂದೆಂದಿಗೂ ಸಂದುಹೋಯಿತು!

ಪದ್ಯ:--ಕಾದಿಹುದು ಅಪಮೃತ್ಯು ರಶ್ಯದ । ಬಾಧೆ ಬಲಿತಿಹುದಿತ್ತ ಹಿಂದೀ । ಯೋಧರೆದ್ದರೆ ನಮಗೆ ಬದುಕುವ ಹಾದಿಯಿರದು ‖ ೪ ‖

ಆಟ್ಲಿ—ವರ್ತಮಾನ ಕಾಲವೀ ರೀತಿ ವಕ್ರವಾಗಿರುವಾಗ ಭವಿಷ್ಯದ ಕುರಿತಾದರೂ ಭರವಸೆಯಿದೆಯೆ? ರಶ್ಯದ ಅಪಾಯವೊಂದು ನಮ್ಮ ಪಾಲಿನ ಧೂಮಕೇತುವಾಗಿ ದಿಗಂತದಲ್ಲಿ ಅಗೋ, ದುಷ್ಪ್ರಭೆ ಬೀರುತ್ತಿದೆ. ಇತ್ತ ಹಿಂದೀ ಸ್ವಾತಂತ್ರ್ಯಯೋಧರು ತಮ್ಮ ಜನ್ಮಸಿದ್ಧ ಹಕ್ಕಿನ ಸಂಪಾದನೆಗಾಗಿ ಕೊನೆಯ ಅತಿ ಕಠೋರ ಹೋರಾಟಕ್ಕೇಳುವದಂತೂ ಖಂಡಿತ. ಹೊರಗಡೆಯಿಂದ ಆ ತಾಡನೆ ಬೀಳುವ ವರೆಗೂ ನಾವು ಒಳಗಡೆಯ ಈ ವೇದನೆಯನ್ನು ಹೀಗೆಯೇ ಉಳಿಸಿಕೊಂಡೆವಾದರೆ ಮುಂದೆ ನಮಗೆ ಪ್ಪಕ್ಕೊ ಇರಸ್ತಿಕೆಯಿಲ್ಲ. ಹಿಂದೀಯರ ಸ್ನೇಹಸಂಬಂಧ, ವ್ಯಾಪಾರ ಸಂಬಂಧವೆಲ್ಲವೂ ಕಡಿದು ಹೋಗಿ ಬ್ರಿಟನು ಅನಾಥವಾಗುವುದೇ ಸರಿ; ಅಧೋಗತಿಗಿಳಿಯುವುದು ಖಂಡಿತ. ಮಂತ್ರಿಗಳೇ ನಾವು-ಜನತಾ ಹಿತ ಸಾಧಕ ಕೂಲಿಗಾರ ಸರಕಾರವು—ಇಂತಹ ಅಪಾಯಕ್ಕಾಮಂತ್ರಣ ಕೊಡುವುದು ಸರಿಯೆ?

ಪದ್ಯ:—ಕೊಟ್ಟು ಬಿಡುವ ಸ್ವರಾಜ್ಯ ಸ್ವಾರ್ಥದ| ಕಟ್ಟನೊಡೆಯುವ ಭಾರತೀಯರ । ಸಿಟ್ಟನಂದಿಸಿ ಭಾವಿ ಮೈತ್ರಿಯ| ನಿಟ್ಟುಕೊಳುವಾ ‖೫‖

ಆಟ್ಲಿ—ಆದ್ದರಿಂದ ಬ್ರಿಟನಿನ ಹಿತದೃಷ್ಟಿಯಿಂದಲೇ ಹಿಂದೀಯರಿಗೆ ಅವರ ಬಯಕೆಯ ಸ್ವಾತಂತ್ರ್ಯವನ್ನು ಕೈಯೆತ್ತಿ ಕೊಟ್ಟುಬಿಡೋಣ ಸ್ವಾರ್ಥ ಸಾಧಿಸಿಕೊಳ್ಳಲಾಗುವ ಕಾಲ ಕಳೆದಿದೆ. ಭಾರತೀಯರ ಮನವೊಲಿಸಿ, ಹಿಂದುಸ್ಥಾನವು ಬ್ರಿಟನಿನ ಮಿತ್ರರಾಷ್ಟ್ರವಾಗಿ ನಿಲ್ಲುವಂತೆ ಸಾಧಿಸಿ ಇಂಗ್ಲಾಂಡು ಮತ್ತು ಹಿಂದುಸ್ಥಾನವೆರಡರ ಭವಿಷ್ಯವನ್ನೂ ಉಜ್ವಲಗೊಳಿಸಿ ನಮ್ಮ ಕೀರ್ತಿಯು ಆಚಂದ್ರಾರ್ಕವಾಗಿ ರಾಜಿಸುವಂತೆ ಮಾಡಬೇಕಾಗಿದೆ; ಮಂತ್ರಿಗಳೇ! ನಾವೀಗ ಮಾಡಬೇಕಾದುದೇನು ಗೊತ್ತೆ?

(ಪದ್ಯ:-ಭಾಮಿನಿ ಷಟ್ಪದಿ)

ಗೆದ್ದು ವಂಚಿಸಿ ಮೋಹ ಮಾಯೆಯೊಳಿದ್ದಿ ಕಟ್ಟಿದ ರಾಜ್ಯ ಬೊಕ್ಕಸ। ಗೆದ್ದಲಿನ ಗೂಡಾಯ್ತು ಕಂಡಿರಿ ಕಾಲ ಮಹಿಮೆಯನು ॥

ಆಟ್ಲಿ—ಹಿಸ್ ಮೆಜೆಸ್ಟೀಸ್ ಸಚಿವರೇ; ಕಾಲ ಮಹಾತ್ಮೆಯ ಪ್ರಭಾವವು ಪ್ರತ್ಯಕ್ಷ ಕಾಣುತ್ತಿದೆಯಲ್ಲಾ! ಒಂದು ಕಾಲದಲ್ಲಿ ಅಜ್ಞರಾಗಿದ್ದ ಜನತೆಯ ಅಸಡ್ಡೆ, ಅಶಕ್ತಿಗಳನ್ನು ತಮ್ಮ ಅನುಕೂಲಕ್ಕಾಗಿ ಉಪಯೋಗಿಸಿಕೊಂಡು, ಅವರನ್ನು ಯುದ್ಧದಲ್ಲಿ ಸೋಲಿಸಿ, ಕಾರ್ಯದಲ್ಲಿ ವಂಚಿಸಿ ವ್ಯವಹಾರದಲ್ಲಿ ಸಮಜಾಯಿಸಿ ಮೋಹಿಸಿ, ಏರಿಸಿ ಕಟ್ಟಿದ್ದ ಸಾಮ್ರಾಜ್ಯಗಳಾಗಲೀ, ಕೂಡಿಸಿಟ್ಟಿದ್ದ ಬೊಕ್ಕಸಗಳಾಗಲೀ ಈಗ ಉಳಿದಿರುವವೇ? ನವಯುಗದ ಬಿರುಗಾಳಿಗೆ ಎಲ್ಲವೂ ಕುಸಿದುಬಿದ್ದುವು; ಒಂದು ಕಾಲದಲ್ಲಿ ಗೆಲವಿನ ಬೀಡಾಗಿದ್ದ ರಾಜ್ಯ ಭಂಡಾರಗಳೆಲ್ಲವೂ ಇಂದು ಗೆದ್ದಲಿನ ಗೂಡಾಗಿವೆ. ಹಲವು ಮುಕುಟಗಳು ಮಣ್ಣು ಪಾಲಾದುವು; ಹಲವು ಸಾಮ್ರಾಜ್ಯಗಳು ಸಮೂಲ ನಾಶವಾದುವು. ಈ ಕಾಲ ಮಹಾತ್ಮೆಯ ಕಡೆಗೆ ನಾವು ಸಕಾಲದಲ್ಲಿ ಕಣ್ಣು ತೆರೆಯುವದು ಬೇಡವೆ?

ಪದ್ಯ:-ಮಧ್ಯ ಯುಗದ ಪ್ರತಾಪ ಕಂತಿತು | ಎದ್ದು ಮೂಡಿಹ ನವ ಯುಗದರವಿ। ತಿದ್ದಿಕೊಂಡಡಿಯಿಡುವ ಕಾಲೋಚಿತದ ಮಾರ್ಗದಲಿ||೧||

ಆಟ್ಲಿ—ಮಧ್ಯ ಯುಗವಿಂದು ಅಂತ್ಯಗೊಂಡಿದೆ; ಅದರ ನಿರ್ಮಾಣಗಳೆಲ್ಲವೂ ಇಂದು ನಿರ್ನಾಮವಾಗಿವೆ. ಆ ಕಾಲದ ಸಾಮ್ರಾಜ್ಯಗಳಿಗೆ, ಸ್ವಾರ್ಥಗಳಿಗೆ, ಕಾಲ ಬಾಧೆ ತಟ್ಟಿದೆ. ನವಯುಗೋದಯವಾಗಿದೆ. ನಾವು ಈ ಹೊಸ ಬೆಳಕಿನಲ್ಲಿ ಹೊಸ ಹೆಜ್ಜೆಯನ್ನಿಟ್ಟರೇ ಬಾಳಬಲ್ಲೆವೆಂಬುದನ್ನು ಮರೆಯಬಾರದು ಹಳೇ ಸ್ವಾರ್ಥಗಳಿಂದ ದೂರವಾಗಲರಿಯದೆ, ಅವುಗಳಿಗೆ ಕೊನೆಯವರೆಗೂ ಅಂಟಿಕೊಂಡಿದ್ದು ಅವುಗಳೊಂದಿಗೇ ನಾಶವಾಗಿ ಹೋದ ಅಪ್ರಾಗತಿಕರ ಮಾದರಿಯನ್ನು ನಾವೂ ಅನುಕರಿಸಕೂಡದು. ಮಂತ್ರಿಗಳೇ. ನಾವು ಕಾಲೋಚಿತ ಧೋರಣೆ ವಹಿಸುವ.

(ಪದ್ಯ:— ಧಾಟಿ:–ಮಂತ್ರಿಗಳಿರ ಕೇಳಿರೀಗ। ಲಕ್ಷ್ಮಿ। ಕಾಂತನ ಕಾಣುವ ಯೋಗ || )

ಹೀಸು ಮೆಜಿಸ್ಟಿ ಮಂತ್ರಿಗಳೇ | ಹಿಂದೂ। ದೇಶದ ಸ್ವಾತಂತ್ರ್ಯ ಕಹಳೆ || ನಾಶವಾಗುವದೆಂಬ ಆಶೆ ನಿರರ್ಥಕ || ಲೇಸಿನಿಂದಲೆ ಸ್ವಾಧಿಕಾರದ | ಭಾಷೆಯನು ನಾವೀಗ ಸಲಿಸುವ || ೧ ||

ಆಟ್ಲೆ—ಹಿಸ್ ಮೆಜಿಸ್ಟೀಸ್ ಸರಕಾರದ ಬಹುಮಾನಪಟ್ಟ ಮಂತ್ರಿಗಳೇ, ಆಲಿಸಿರಿ ಈಗ ನಾವು ಮುಖ್ಯತ: ಧೋರಣೆ ಬದಲಾಯಿಸಬೇಕಾದುದು ಭಾರತದ ಕಡೆಗೆ ಹಿಂದುಸ್ಥಾನದಲ್ಲಿ ಹಲವು ವರುಷಗಳಿಂದ ಬಾರಿಸಲ್ಪಡುತ್ತಿರುವ ಸ್ವಾತಂತ್ರ್ಯ ಸಮರ ದುಂದುಭಿಯು ತಾನಾಗಿ ನಿಂತೀತೆಂಬ ಬಯಲಾಸೆಯಿನ್ನು ಬೇಡ; ಸಾಕು; ಅಂತಹ ನಿರೀಕ್ಷೆಯಲ್ಲೇ ಇಷ್ಟು ಸಮಯವನ್ನು ಕಳೆದುದೇ ಹೆಚ್ಚಾಯಿತು. ಹಿಂದುಸ್ಥಾನಕ್ಕೆ ಸ್ವಾಧಿಕಾರ ದಾನ ಮಾಡುವುದೇ ನಮ್ಮ ಗುರಿಯೆಂದು ಚಕ್ರವರ್ತಿ ಸರಕಾರವು ಮೇಲಿಂದ ಮೇಲೆ ಕೊಟ್ಟ ಭಾಷೆಯಿದೆ ಆ ಭಾಷೆಯಂತೆ ಕೂಡಲೇ ಹಿಂದೀಯರಿಗೆ ಸ್ವಾತಂತ್ರ್ಯ ಸಂದಾಯ ಮಾಡುವುದರಲ್ಲೇ ಇಂಗ್ಲಾಂಡಿನ ಹಿತವಿದೆ. ಆದಕ್ಕಾಗಿ ನಾವೀಗ ಮಾಡಬೇಕಾದುದೇನು ಬಲ್ಲಿರಾ?

ಪದ್ಯ:—ಪೆಥಿಕಲೆಕ್ಸಾಂಡರ ಕ್ರಿಪ್ಸ। ವಾಯು ¦ ರಥವೇರಿ ಢಿಲ್ಲಿಗೆ ಕ್ಷಿಪ್ರ || ಹಿತವಾದ ವಚನ ಯೋಜನೆಗಳ ಮುಂದಿಟ್ಟು || ಸತತ ಯತ್ನದಿ ಭಾರತದ ಸ। ದ್ಗತಿಯ ಸಾಧಿಸಿ ಬನ್ನಿ ಹೊರಡಿರಿ || ೨ ||

ಆಟ್ಲೆ—ಸರ್. ಸ್ಟಾಫೋರ್ಡ್ ಕ್ರಿಪ್ಸ್, ಮಿ. ಅಲೆಕ್ಸಾಂಡರ್ ಮತ್ತು ಮಿ. ಪೆಥಿಕ್ ಲಾರೆನ್ಸರೇ; ಚಕ್ರವರ್ತಿ ಸರಕಾರದ ವ್ಯಾಪಾರ ಮಂತ್ರಿ, ನೌಕಾ ಮಂತ್ರಿ, ಮತ್ತು ಭಾರತ ಮಂತ್ರಿ ತ್ರಿಮೂರ್ತಿಗಳೇ. ನೀವೀಗಲೇ ವಿಮಾನ ಹತ್ತಿ ಹೊರಡಬೇಕು; ನವಢಿಲ್ಲಿಯಲ್ಲಿಳಿಯಬೇಕು ಅಲ್ಲಿರುವ ಹಿಂದೀ ನಾಯಕರೊಡನೆ ಸಹೃದಯದ ಪರ್ಯಾಲೋಚನೆ ನಡಿಸಿ, ಅವರಪೇಕ್ಷಿಸುವ ಸ್ವಾತಂತ್ರ್ಯ ಯೋಜನೆಯನ್ನು ತಯಾರಿಸಿಕೊಟ್ಟು, ಎರಡೂ ರಾಷ್ಟ್ರಗಳ ಭಾವೀ ಮೈತ್ರಿಗೆ ಭದ್ರವಾದ ಅಸ್ತಿವಾರ ಹಾಕಿ ಬರಬೇಕು. ಇಂಗ್ಲಾಂಡಿನ ಭವಿಷ್ಯದ ಮೇಲು-ಕೀಳು ನಿಮ್ಮ ಆ ಕಾರ್ಯ

ವನ್ನೇ ಅವಲಂಬಿಸಿದೆ ಈ ವಿಷಯದಲ್ಲಿ ಯೋಗ್ಯ ಕಂಡಂತೆ ವರ್ತಿಸುವ ಸ್ವಾತಂತ್ರ್ಯವನ್ನು ಮಂತ್ರಿಮಂಡಲದ ಪರವಾಗಿ ನಿಮಗಿತ್ತಿದ್ದೇನೆ. ಹೊರಡಿರಿ, ವಿಜಯಿಗಳಾಗಿರಿ. ಇದೋ ವಿಜಯ ವೀಳ್ಯ!

ಪದ್ಯ:-ಘನ ಸರಕಾರದಾಣತಿಯೂ| ದೊಡ್ಡ| ಹೊಣೆಯಿದು ಭಾವಿ ಸದ್ಗತಿಯೂ ॥ ಹೆಣೆದಿದೆ ತಮ್ಮಯ ಕಾರ್ಯಸೂತ್ರದೊಳೆಂದು|| ನೆನದು ಮೆದುಳನು ಮಸೆದು ಸರ್ವ ವ | ನಣಿಗೊಳಸಿ ಸನ್ನದ್ಧರಾದರು || ೩ ||

ಕ್ರಿಪ್ಸ್. ಅಲೆಕ್ಸಾಂಡರ್, ಪೆಥಿಕ್ ಲಾರೆನ್ಸ್—ಸರಿ ಹಿಸ್ ಮೆಜೆಸ್ಟೀಸ್ ಸರಕಾರದ ಹೊಣೆಯೆಷ್ಟು ದೊಡ್ಡದೆಂಬುದನ್ನು ವಿವರಿಸ ಬೇಕೆಂದಿಲ್ಲ. ಇಂದು ಭಾರತ ರಾಜಕೀಯದಲ್ಲಿ ತಲೆಯೆತ್ತಿರುವ ಸರ್ವ ಸಮಸ್ಯೆಗಳನ್ನೂ ಪರ್ಯಾಲೋಚಿಸಿಕೊಂಡು ಮೆದುಳ ಚೀಲವನ್ನು ತುಂಬಿಕೊಂಡೇ ಭಾರತಕ್ಕೆ ಹೊರಟುಬಿಡುತ್ತೇವೆ!

(ಪದ್ಯ:- ಭಾಮಿನಿ ಷಟ್ಪದಿ)

ಏರಿದರು ಲಂಡನು ವಿಮಾನವ| ಹಾರಿಕೊಂಡೈ ತಂದು ಢಿಲ್ಲಿಯೊ। ಳೂರಿದರು ಪಾದವನು ಕರೆದರು ಭಾರತೀಯರನು ||

ಕ್ರಿಪ್ಸ್—ಶಹಭಾಸ್! ಲಂಡನಿನಿಂದ ಹಾರಿಬಂದು ಢಿಲ್ಲಿಯಲ್ಲಿಳಿ ದಂತಾಯಿತು. ಈ ಪುರಾತನ ಮಹಾರಾಷ್ಟ್ರದ ಭವಿಷ್ಯದ ಪ್ರವಾದಿಗ ಳಾಗುವಂತಾದ ನಮ್ಮ ಭಾಗ್ಯವು ದೊಡ್ಡದು! ಇನ್ನು ಹಿಂದೀಯರಿಗೆ ಬ್ರಿಟಿಷ್ ಕೂಲಿಗಾರ ಸರಕಾರದ ಸುಭಸಂದೇಶವನ್ನು ಸಾರಿಬಿಡುತ್ತೇವೆ

ಪದ್ಯ:- ದೂರದಿರಿ, ಸಂದೇಹ ಸಂಶಯ । ತೋರದಿರಿ ಸಟೆಯಲ್ಲ, ಹೇಳಿರಿ | ಭಾರತವು ಬಯಸುವ ಸ್ವತಂತ್ರವನೀಯೆ ಬಂದಿಹೆವು ॥ ೧ ||

ಪೆಥಿಕ್ ಲಾರೆನ್ಸ್-- ಪ್ರಿಯ ಭಾರತೀಯರೇ, ಎಲ್ಲರೂ ಆಲಿಸ ಬೇಕು. ಇಂಗ್ಲಾಂಡಿನ ಧೋರಣೆಯ ಕುರಿತು ಈ ಬಾರಿ ವಯೆಯಿಟ್ಟು ಯಾವ ವಿಧದ ಸಂಶಯವನ್ನೂ ಕಟ್ಟಿಕೊಳ್ಳದೆ ನೀವಪೇಕ್ಷಿಸುವ ಸ್ವಾತಂ ತ್ರ್ಯವೆಂತಹದು, ಅದರ ರೂಪರೇಷೆ ಹೇಗಿರಬೇಕು, ಎಂಬುದನ್ನೀಗ ನಮಗೆ ತಿಳಿಸಬೇಕು. ಈ ಬಾರಿ ನಮ್ಮ ಅಭಿಪ್ರಾಯದಂತಲ್ಲ; ನಿಮ್ಮ ಅಭಿಮತದಂತೆ ಹಿಂದೀ ಸ್ವಾತಂತ್ರ್ಯವನ್ನು ರೂಪಿಸಿಹೋಗಲು ಬಂದವ

ರಿದ್ದೇವೆ ನಾವು. ಬನ್ನಿ ಮುಂದೆ. ನಿಮಗೆ ಬೇಕಾದುದೇನು ಹೇಳಿ; ನಾವು ಮಾಡಬೇಕಾದುದೇನು ತಿಳಿಸಿ.

(ಪದ್ಯ:- ದಾಟಿ ಬನ್ನಿರೈ ಸಂಸಾರ ಶರಧಿಯನು ದಾಟುವರು)

ಬಂದೆವೈ ಬಿಚ್ಚು ಮನ। ದಿಂದಿಲ್ಲಿ ಯೋಜನೆಯ। ತಂದಿಲ್ಲ ವಿಂಗ್ಲಾಂಡಿನಿಂದ॥ ಹಿಂದೀಯ ನಾಯಕರು। ಒಂದಾಗಿ ತಿಳಿಸಿದುದ। ಮುಂದಿಡುವದೆಮ್ಮ ಸಂಬಂಧ॥ ೧॥

ಕ್ರಿಪ್ಸ್- ಹಿಂದೀ ಪಕ್ಷ ಪ್ರಮುಖರೆಲ್ಲರೂ ಆಲಿಸಬೇಕು ನಾವು ಲಂಡನಿನಿಂದ ಬರುವಾಗ, ಯಾವುದೊಂದು ಯೋಜನೆಯನ್ನೂ ತಂದಿಲ್ಲ. ಹಿಂದೀ ಸ್ವರಾಜ್ಯವು ಹಿಂದೀಯರಿಂದಲೇ ರೂಪಿಸುವಂತೆ ಮಾಡಬೇಕೆಂಬುದೊಂದನ್ನಲ್ಲದೆ ಬೇರಾವದನ್ನೂ ಈ ಬಾರಿ ನಾವು ನಮ್ಮ ಬುದ್ಧಿ ಬೊಕ್ಕಸದಲ್ಲಿ ತುಂಬಿಸಿಕೊಂಡು ಬಂದಿಲ್ಲ ಆದ್ದರಿಂದ ಹಿಂದೀ ಪಕ್ಷ ನಾಯಕರು ತಾವು ಒಂದೆಡೆ ಕಲೆತು ಒಂದು ನಿರ್ಧಾರಕ್ಕೆ ಬಂದು ನಮಗದನ್ನು ತಿಳಿಸಬೇಕೆಂದು ಕೇಳಿಕೊಳ್ಳುತ್ತೇವೆ ಹಾಗೆ ಒಮ್ಮತದಿಂದ ಮುಂಬರುವ ಅಭಿಪ್ರಾಯಕ್ಕನುಗುಣವಾದ ಸ್ವಾತಂತ್ರ್ಯ ಯೋಜನೆಯನ್ನು ಮುಂದಿಡುವುದೊಂದೇ ನಮ್ಮ ಗುರಿ; ಇದೊಂದೇ ನಮ್ಮ ಮುಂದಿರುವ ಕಾರ್ಯ.

ಪದ್ಯ: – ಗಣ್ಯ ಪಕ್ಷಗಳಾದ ಕಾಂಗ್ರೆಸ್ಸು ಲೀಗುಗಳ। ಮಾನ್ಯ ಪ್ರತಿನಿಧಿಗಳೈತರಲಿ॥ ಜಿನ್ನ ಸರ್ದಾರ ನಿಸ್ತಾರ ಆಲೀಖಾನ| ರಿನ್ನು ನೆಹರು ಅಜಾದರಿರಲಿ॥ ೨॥

ಅಲೆಕ್ಸಾಂಡರ್— ಭಾರತದ ಪ್ರಮುಖ ಪಕ್ಷಗಳಾದ ಕಾಂಗ್ರೆಸು ಮತ್ತು ಲೀಗುಗಳು ಒಂದು ಸಮ್ಮೇಲನಕ್ಕೆ ತಂತಮ್ಮ ಪ್ರತಿನಿಧಿಗಳನ್ನಾರಿಸಲಿ. ಇಕ್ಕಡೆಯ ಮುಖಂಡರಾದ ಮಿ. ಜಿನ್ನಾ ಸಾಹೇಬರು, ಪಂಡಿತ ನೆಹರುಗಳು, ಸರ್ದಾರ್ ವಲ್ಲಭಾಯಿಗಳು ಮಿ. ಲಿಯಾಖತ್ ಆಲೀಖಾನರು, ಸರ್ದಾರ್ ಅಬ್ದುಲ್ ರಾಬ್ ನಿಸ್ತಾರರು, ಮೌಲಾನಾ ಅಝಾದರು ಒಂದೆಡೆ ಕಲೆತು ಪರ್ಯಾಲೋಚನೆ ನಡೆಯಿಸಿ, ಒಂದು ತೀರ್ಮಾನಕ್ಕೆ ಬಂದು ಅದನ್ನು ನಮಗೆ ದಯವಿಟ್ಟು ತಿಳಿಸಲಿ.

ಪದ್ಯ:—ಹಿರಿಮೆ ಸಂಸ್ಕಾರ ಸಂಪತ್ತು ಸುಖ ಸಾಮ್ರಾಜ್ಯ। ಶರಧಿ ಯಿದು ನಿಮ್ಮ ಘನದೇಶ || ಬರೆಯಿರಾಕೆಯ ಭವಿಷ್ಯವನೆಂದು ಕರೆಯು ವೆವು | ಹೊರತು ಬೇರಿಲ್ಲ ಸಂದೇಶ || ೩ ||

ಲಾರೆನ್ಸ್—ಹಿಂದೀ ಧುರೀಣರೇ. ನಿಮ್ಮೀ ಪುರಾತನ ರಾಷ್ಟ್ರದ ಹಿರಿಮೆಯು ಅಗಾಧವಾದುದು; ಅದರ ಸಂಸ್ಕೃತಿ, ಸಂಪತ್ತು, ಸೌಕರ್ಯ ಗಳು ಸಾಗರ ಸಮಾನವಾದವುಗಳು. 40ಕೋಟಿ ಪುತ್ರರನ್ನು ಒಂದೇ ಕುಟುಂಬವಾಗಿ ಮಾಡಿ ಪೋಷಿಸುತ್ತಿರುವ ಮಾತೆ ನಿಮ್ಮೀ ರಾಷ್ಟ್ರ. ಈ ಘನ ರಾಷ್ಟ್ರವನ್ನು ಸ್ವಾಧಿಕಾರದ ಕಡೆಗೆ ನಡೆಯಿಸುವದೇ ತನ್ನ ಗುರಿ ಯೆಂದು ಹಿಸ್ ಮೆಜಿಸ್ಟೀಸ್ ಸರಕಾರವು ಆದಿಯಿಂದಲೂ ಸಾರುತ್ತಾ ಬಂದಿದ್ದುದನ್ನು ಇಂದು ಸಾರ್ಥಕಗೊಳಿಸಲು ಬಂದಿದ್ದೇವೆ. ಆ ಗುರಿ ಯನ್ನು ತೋರಿಸತಕ್ಕವರು, ನಿಮ್ಮೀ ಮಹಾರಾಷ್ಟ್ರದ ಘನತೆಗೆ ತಕ್ಕಂತೆ ಅದರ ಭವಿಷ್ಯವನ್ನು ರೂಪಿಸತಕ್ಕವರು ನೀವೇ. ಚಕ್ರವರ್ತಿ ಸರಕಾರದ ಪರವಾಗಿ ನಾವು ತಂದಿರುವ, ಈಗ ನಿಮಗೆ ಮುಟ್ಟಿಸಿರುವ ಸಂದೇಶ ವೆಂದರೆ ಇದೇ ಬನ್ನಿ; ಹಿಂದೀ ಪ್ರಮುಖರೇ ಬನ್ನಿ ಮುಂದೆ!

## ದೃಶ್ಯ ೨

(ಜಿನ್ನಾ ಸಾಹೇಬರ ಒಡ್ಡೋಲಗ)

ಹಾಡುಗಾರ—ಮಹಾಮನುಷ್ಯನಿಗೆ ಸುಸ್ವಾಗತ

ಜಿನ್ನಾ—ಬಹಳ ಸಂತೋಷ.

ಹಾಡುಗಾರ-ತೇಜಪುಂಜರ ಪರಿಚಯ ತಿಳಿಯಬೇಕಾಗಿಬಂತಲ್ಲಾ.

ಜಿನ್ನಾ—ಪಾಕಿಸ್ತಾನದ ಶಿಲ್ಪಿಯನ್ನು ಬಲ್ಲಿರಷ್ಟೆ?

ಹಾಡುಗಾರ ಕಾಯಿದೇ ಅಝಾಮ್ ಜಿನ್ನಾ ಸಾಹೇಬರು.

ಜಿನ್ನಾ—ಸರಿ.

ಹಾಡುಗಾರ—ಚಿತ್ತೈಸಿದ ಕಾರಣ?

ಜಿನ್ನಾ—ಇದೆ; ಅತ್ಯಂತ ಪ್ರಾಮುಖ್ಯದ್ದಿದೆ. ೧೦ಕೋಟಿ ಮುಸ್ಲಿ ಮರ ಭವಿಷ್ಯಕ್ಕೆ ಸಂಬಂಧಿಸಿರುವ ಮಹತ್ವಾದ ಸನ್ನಿವೇಶವೇ ಬಂದಿದೆ.

(ಪದ್ಯ:—ವಾರ್ಧಿಕ್ಯ ಷಟ್ಪದಿ)

ಮಂತ್ರಿತ್ರಯರ ಕರೆಯನಕ್ಷರಶಃ ಮಥಿಸುತಾ । ಮಂತ್ರಣವ

ಸ್ವೀಕರಿಸಿ ಜಿನ್ನ ನಿರ್ಧರಿಸಿದ ಕು । ತಂತ್ರವೀ ಬಾರಿ ಬ್ರಿಟಿಷರದಲ್ಲ, ಸೋತು ಸಖ್ಯವ ಬಯಿಸಿದಂತೀರ್ಪರು ||

ಜಿನ್ನಾ—ಓಹೋ! ಬ್ರಿಟಿಷ್ ಸರಕಾರವು, ಹಿಂದೀ ರಾಜಕೀಯ ಸಮಸ್ಯೆಗಳನ್ನು ತೀರ್ಮಾನಿಸಲು ಕಳುಹಿಕೊಟ್ಟಿರುವ ಮಂತ್ರಿ ಸಮಿತಿಯಿಂದ ಆಮಂತ್ರಣ ಬಂದಿದೆ. ಸದ್ಯದ ಪರಿಸ್ಥಿತಿ, ಸರಕಾರದ ಹೇಳಿಕೆ, ಮಂತ್ರಿತ್ರಯರ ಆಮಂತ್ರಣದ ರೀತಿನೀತಿಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ನೋಡುವಾಗ ಬ್ರಿಟಿಷರು ತಮ್ಮ ಪದ್ಧತಿಯ ಕಪಟನಾಟಕವಾಡಲು ಈ ಬಾರಿ ನಡು ಬಿಗಿದಿಲ್ಲವೆಂಬುದು ಸ್ಪಷ್ಟವಿದೆ ಜಾಗತಿಕ ಯುದ್ಧದಿಂದ ನಿತ್ರಾಣಗೊಂಡಿರುವ ಬ್ರಿಟನನ್ನು ಹಿಂದೀ ಸಮಸ್ಯೆಗಳು ತಲೆ ಕರಡು ಮಾಡಿರಬೇಕು ಆದ್ದರಿಂದ ಒಮ್ಮೆ ಕೈತೊಳೆದು ಎದ್ದು ಬಿಡೋಣವೆಂದೇ ಅವರೀ ಬಾರಿ ಸಂಕಲ್ಪಿಸಿದಂತೆ ಕಾಣುತ್ತಿದೆ ಈ ಬಾರಿ ಸಖ್ಯ ನಿರ್ಮಿಸಿಲು ಬಂದಿದ್ದಾರೆ; ಸಮಸ್ಯೆ ನಿರ್ಮಿಸಲಿಕ್ಕಲ್ಲ. ಆದ್ದರಿಂದ ಆಮಂತ್ರಣವನ್ನು ಅಂಗೀಕರಿಸಿದ್ದೇನೆ.

ಪದ್ಯ:—ಎಂತಾಗಲೇನಾಗಲಿಂದು ಧರಿಸಿಹ ನಮ್ಮ। ಪಂಥವಿದೆ ಬಿಡಲಾರೆವದನು ಪಾಕಿಸ್ತಾನ । ಬಂತು, ಸಂದಿತು, ಕೊಟ್ಟೆವೆನದೆ ಹಿಡಿದಿಹ ಛಲವನಂತ್ಯಗೊಂಡರು ಬಿಡುವೆವೆ? || ೧ ||

ಜಿನ್ನಾ—ಯಾರೇ ಬರಲಿ, ಏನೇ ಸಂಭವಿಸಲಿ, ನಾವಿಟ್ಟ ಹೆಜ್ಜೆಯನ್ನು ಇನ್ನು ಹಿಂದೆಳೆದುಕೊಳ್ಳುವಂತಿಲ್ಲ ಕೋರಿದ ಬಯಕೆಯಲ್ಲಿ ಕೊಮು ಮಾತ್ರ ಕಮ್ಮಿಯಾದರೂ ನಮ್ಮ ಸ್ವೀಕಾರವಿಲ್ಲ. ನಾವು ಕೇಳಿರುವ ಪಾಕಿಸ್ತಾನ್–ಪ್ರತ್ಯೇಕ ಸ್ವತಂತ್ರ ಸಾರ್ವಭೌಮಾಧಿಕಾರೀ ರಾಷ್ಟ್ರ—ನಮಗೆ ದೊರೆತ ಹಿನಹ, ಅದು ಸಂದಿತು ಎಂಬ ವಾಗ್ದಾನ ಪಡೆಯದೆ ತೊಟ್ಟ ಛಲವನ್ನು ಬಿಡುವಂತಿಲ್ಲ. ಸಾವಿನ ತನಕವೂ ಸಾಧನೆಯೇ ಸರಿ.

ಪದ್ಯ:– (ಧಾಟಿ–ಅಣ್ಣ ಸುಯೋಧನ ಲಾಲಿಸು ನಿನ್ನಯ । ಪುಣ್ಯ ಫಲೋದಯವ)

ಪಶುತಮ ಬಹುಮತ ಪಡೆದಿಹ ಹಿಂದೂ | ವಶವಿದೆ ರಾಷ್ಟ್ರವಿದು ।
ದಶಕೋಟಿಗಳಿಹ ಮುಸ್ಲೀಮರ ದು । ರ್ದೆಸೆಯೇ ಮುಂದಿಹುದು || ೧ ||

ಜಿನ್ನಾ—ಆಹಾ! ಹಿಂದುಸ್ಥಾನದಲ್ಲಿ ಹಿಂದುಗಳೇ ಪಾಶವಿಕ ಬಹುಮತವಿರುವಾಗ, ಅವರೊಂದಿಗೆ ಸಂಸ್ಕೃತಿ ಸಂಪ್ರದಾಯಗಳಿಂದ ಸಂಪೂರ್ಣ ಭಿನ್ನವಾಗಿರುವ ೧೦ ಕೋಟಿ ಮುಸಲ್ಮಾನರು ವಾಸಿಸಿ ಅಭಿವೃದ್ಧಿ ಪಡೆಯುವದೆಂದರೆ ಸಾಧ್ಯವೆ? ಎಂದೆಂದಿಗೂ ಅಸಾಧ್ಯವೆಂಬುದು ಈಗ ಮಂದಟ್ಟಾಗಿದೆ ಮುಸ್ಲಿಂ ಜನತೆಯಲ್ಲೀಗ ನವಜಾಗ್ರತಿ ಮೊಳೆತಿದೆ ಅನ್ಯ ಧರ್ಮ, ಪ್ರತ್ಯೇಕ ಸಂಸ್ಕೃತಿ, ಭಿನ್ನ ಮನೋವೃತ್ತಿಯ ಸಮಾಜದ ನಡುವೆ ಅಲ್ಪಸಂಖ್ಯಾಕರಾಗಿ ಉಳಿಯುವದೆಂದರೆ ಅರೆಜೀವದಿಂದಿದ್ದಂತೆಯೇ ಸರಿ. ಇಲ್ಲ; ಸಾಧ್ಯವಿಲ್ಲ. ಹಿಂದೂ ಬಹುಮತದಾಳ್ವಿಕೆಯನ್ನು ಸಹಿಸಿಕೊಂಡಿರಲು ಇನ್ನು ನಮ್ಮಿಂದಾಗದು. ಆದ್ದರಿಂದ ಈ ಶಪಥ—

ಪದ್ಯ:- ಪಾಕಿಸ್ತಾನವೆ ಗತಿಯುಲ್ಲದೆ ಪ್ರತಿ | ವಾಕ್ಯವನಾಲಿಸೆನು ॥
ಏಕೀಕರಣದ ಸೂಚನೆಗಳನು ನಿ | ರಾಕರಿಸದೆ ಬಿಡೆನು ॥ ೨ ॥

ಜಿನ್ನಾ - ಮನಸ್ಸಾಕ್ಷಿಪೂರ್ವಕವಾಗಿ ಶಪಥ ತೊಡುತಿದ್ದೇನೆ ಏನೇ ಬರಲಿ; ಪಾಕಿಸ್ತಾನ ವಿನಹಾ ಬೇರಾವ ಮಾತು ಬಂದರೂ ಅದನ್ನಾಲಿಸುವಂತಿಲ್ಲ. ಏಕಕೇಂದ್ರ, ಅಖಂಡ ಭಾರತದ ಭ್ರಮೆ ಕಟ್ಟಿಕೊಂಡವರು ಬಿಸಿಲ್ಗುದುರೆಯ ಬೆನ್ನು ಹತ್ತುತಿದ್ದಾರೆಂಬುದನ್ನು ಪ್ರದರ್ಶಿಸದೆ ಹೋದರೆ ನಾನು ೧೦ ಕೋಟಿ ಮುಸ್ಲಿಮರ ಹೃದಯಪೀಠಾರೂಢನಾಗಿರುವ ಕಾಯಿದೇ ಆಝಾಮ್ ಜಿನ್ನನೇ ಅಲ್ಲ!

ಪದ್ಯ: ಬಂದಿಹ ಮಂತ್ರಿತ್ರಯರನು ಕೂಡಲೆ | ಸಂಧಿಸಿ ತಿಳುಹುವೆನು ॥ ಎಂದೆಂದಿಗು ಹಿಡಿದಿಹ ಈ ಧೋರಣೆ | ಯೊಂದಂಗುಲ ಬಿಡೆನು ॥ ೩ ॥

ಜಿನ್ನಾ - ಹಿಂದೀ ಸಮಸ್ಯೆಯ ತೀರ್ಮಾನಕ್ಕೆಂದು ಬಂದಿರುವ ಬ್ರಿಟಿಷ್ ಮಂತ್ರಿತ್ರಯರು ಕರೆದಿರುವ ಸಮ್ಮೇಲನಕ್ಕೆ ಲಿಯಾಖತ್ ಅಲೀಖಾನ್, ನಿಸ್ತಾರ್, ಗಝ್ನಾಫರ್ ಅಲೀಖಾನರೊಂದಿಗೆ ಹಾಜರಾಗಿ ಪಾಕಿಸ್ತಾನ್ ಬೇಡಿಕೆಯನ್ನು ಮುಂದಿಟ್ಟು ಕೊನೆಯ ಪರೀಕ್ಷೆ ಮಾಡಿಬಿಡುತ್ತೇನೆ. ಆದರೆ, ನಾನೀಗ ನಿಂತಿರುವ ಸ್ಥಾನದಿಂದ ಒಂದೇ ಒಂದಿಂಚಿನಷ್ಟು ಕದಲಲಾರೆನೆಂಬುದನ್ನು ಆ ಬ್ರಿಟಿಷರು ಮತ್ತು ಈ ಹಿಂದೂ ಕಾಂಗ್ರೆಸು ಸೆರಗಿನಲ್ಲಿ ಗಂಟುಹಾಕಿಕೊಳ್ಳಲಿ. ಪಾಕಿಸ್ತಾನ್ ಝಿಂದಾಬಾದ್!

## ದೃಶ್ಯ ೩.

(ನೆಹರು ಒಡ್ಡೋಲಗ)

ಹಾಡುಗಾರ— ಮಹಾಮನುಷ್ಯರಿಗೆ ಸುಸ್ವಾಗತ

ನೆಹರು— ಬಹಳ ಸಂತೋಷ.

ಹಾಡುಗಾರ — ತೇಜಃಪುಂಜರ ಪರಿಚಯ?

ನೆಹರು— ಪವಿತ್ರ ಭೂಮಿ ಭಾರತದ ಪ್ರಥಮ ಸೇವಕ.

ಹಾಡುಗಾರ— ಸರ್ವಮಾನ್ಯ ನಾಯಕ ಪಂಡಿತ ನೆಹರು

ನೆಹರು— ಸರಿ.

ಹಾಡುಗಾರ— ಚಿತ್ತೈಸಿದ ಕಾರಣ?

ನೆಹರು— ಇದೆ. ಅದು 40 ಕೋಟಿ ಹಿಂದೀಯರ ಭವ್ಯ ಭವಿಷ್ಯಕ್ಕೆ ಸಂಬಂಧಿಸಿದ್ದೇ ಆಗಿದೆ. ಚರಿತ್ರಾರ್ಹ ಪ್ರಾಮುಖ್ಯ ವಿಷಯ ಕಣ್ಣ ಮುಂದೆ ಬಂದಿದೆ.

ಪದ್ಯ:-(ಭಾಮಿನಿ)

ಅರುಣ ಕಿರಣವು ಸೂಸುತಿದೆ ಮುಂ । ಬರುವ ಸ್ವಾತಂತ್ರ್ಯದ ನವೋದಯ । ಕುರುಹು ಕಣ್ಣಿಗೆ ಕಾಣುತಿದೆಯೆಂದೂಹಿಸಿದ ನೆಹರು॥

ನೆಹರು— ಭೇಷ್! ಸ್ವಾತಂತ್ರ್ಯ ಸೂರ್ಯೋದಯ ಮೊದಲಿನ ಅರುಣ ಕಿರಣಗಳಿಂದು ಭಾರತದ ವಾತಾವರಣದಲ್ಲಿ ಹಬ್ಬಿವೆ ಕಾಲನ ಕೈವಾಡವಂತಹದು ದರೋಡೆಗೆ ಅಪಮೃತ್ಯು; ದಾಸ್ಯಕ್ಕೆ ಅಲ್ಪಾಯುಷ್ಯ; ಧೈರ್ಯ ಸಾಹಸ ಮತ್ತಾಮೂಲಕದ ಸ್ವಾತಂತ್ರ್ಯಗಳಿಗೇನೆ ಚಿರಾಯುಷ್ಯ ಮತ್ತು ವಿಜಯವು ಎಂದೆಂದಿಗೂ ಕಟ್ಟಿಟ್ಟದ್ದೇ. ಈ ನಾಣ್ನುಡಿಗೆ ನಾಲ್ಕೂರು ಮಿಲಿಯ ಜನತೆಯ ಭಾರತ ಭೂಮಿಯೇ ಜೀವಂತ ನಿದರ್ಶನವಾಗಿ ಪ್ರಪಂಚದಿದಿರು ನಿಲ್ಲುವಂತಾಗುವ ಸುಯೋಗವು ಕೂಡಿ ಬಂದಂತೆ ಕಾಣುತ್ತಿದೆ.

ಪದ್ಯ:- ಕರೆಯು ಬಂದಿದೆ ಮಂತ್ರಿ ಸಮಿತಿಯ। ಮರೆಯಲಾಗದ ಶಂಕೆ ಮೂಡದ। ಪರಿಯೊಳಿವೆ ನುಡಿನಡೆಗಳಿದ ಸ್ವಾಗತಿಸಿ ನೋಡು ವೆವು ॥ ೧ ॥

ನೆಹರು—ಹಿಂದೀ ರಾಜಕಾರಣದ ಪರ್ಯಾಲೋಚನೆ ಮತ್ತು ನಿರ್ಧಾರಗಳಿಗಾಗಿ ಲಂಡನಿನಿಂದಾಗಮಿಸಿರುವ ಬ್ರಿಟಿಷ್ ಸರಕಾರದ ಮಂತ್ರಿತ್ರಯರಿಂದ ಪರ್ಯಾಲೋಚನೆಗಾಗಿ ಆಮಂತ್ರಣ ಬಂದಿದೆ. ಸಂದೇಹವೊಂದೇ ನಮ್ಮ ಹೆಗ್ಗುಣ-ಸಮರವೊಂದೇ ನಮ್ಮ ಸಾಧನೆ-ಎಂಬ ಅಪವಾದ ತಟ್ಟುವಂತೆ ನಾವು ವರ್ತಿಸಕೂಡದು ಈ ಬಾರಿಯ ಬ್ರಿಟಿಷ್ ಸರಕಾರದ ಆಶ್ವಾಸನೆ ಮತ್ತು ಮಂತ್ರಿತ್ರಯರ ಮಾತುಗಳಲ್ಲಿ ಸರಳತೆ, ಸೌಜನ್ಯತೆ, ಸೌಹಾರ್ದತೆಯೇ ತುಂಬಿರುವಂತಿದೆ. ಈ ಸಂದರ್ಭವನ್ನು ಕಳಕೊಳ್ಳದೆ, ಅದನ್ನು ಸದುಪಯೋಗಪಡಿಸಲು ಪ್ರಯತ್ನಿಸುವದು ನಮ್ಮ ಆದ್ಯ ಕರ್ತವ್ಯ.

ಪದ್ಯ: (ಧಾಟಿ-ಕರಸಿ ಸಂಜಯನ ಕು | ಳ್ಳಿರಿಸಿ ಧರ್ಮಜ ಕೇಳ್ದ | ಗುರು ಭೀಷ್ಮ.....)

ಅರರೆ ಶಾಭಾಸು ಸ್ವಾತಂತ್ರ್ಯ ಸೂರ್ಯೋದಯ | ಕಿರಣವು ಚೆಲ್ಲುತಿದೆ ॥ ಧುರದಿಂದ ಕಂಗೆಟ್ಟ ಬ್ರಿಟನೀಗ ನ್ಯಾಯದ | ಸರಿ ದಾರಿಗೈ ತಂದಿದೆ ‖ ೧ ‖

ನೆಹರು—ಶಹಭಾಸ್! ಎರಡನೇ ಜಾಗತಿಕ ಮಹಾ ಯುದ್ಧದಿಂದಾಗಿ ಕೈಕಾಲ ತ್ರಾಣ ಕಳಕೊಂಡ ಸಾಮ್ರಾಜ್ಯಶಾಹಿ ಬ್ರಿಟನು ಈಗ ತಾನೇ ಕಣ್ಣು ತೆರೆಯುವ ಕಾಲ ಬಂದಿದೆ. ಇಂದಿನ ಕ್ರಾಂತಿಯುಗವು, ಸಮಾನತಾಮನ್ವಂತರವು, ಸ್ವಾತಂತ್ರ್ಯ ಕಾಲವು ಪರಾಕ್ರಮಣವನ್ನು ಸಹಿಸದು, ದಾಸ್ಯ ಛಾಯೆಯನ್ನು ಕೂಡಾ ವಹಿಸದು, ಎಂಬುದನ್ನು ಬ್ರಿಟಿಷರು ಈಗತಾನೇ ತಿಳಿದುಕೊಂಡಂತಿದೆ. ಶುಭ ಕಾಲ! ಹಿಂದೀ ಸ್ವಾತಂತ್ರ್ಯದ ಉದಿತ ಸೂರ್ಯನ ಎಳೇ ಕಿರಣಗಳು ಚೆಲ್ಲುತ್ತಿರುವ ಮನಮೋಹಕ ದೃಶ್ಯ ಕಾಣುತ್ತಿದೆ. ಜಯವಾಗಲಿ ಸ್ವಾತಂತ್ರ್ಯದೇವಿಗೆ: ಜೈ ಹಿಂದ್!

ಪದ್ಯ: ಬಾಪುಜಿ ಕೆಣಕಿ ಎಬ್ಬಿಸಿದಂಥ ರಾಷ್ಟ್ರ ಪ್ರ | ತಾಪವು ಫಲಿಸಲಿದೆ‖ ಭಾಪುರೆ ಬಂಧನ ದಾಸ್ಯಸಂಕಷ್ಟ ಪ್ರ | ಲಾಪವು ಮುಗಿಯಲಿದೆ ‖೨‖

ನೆಹರು—ಜೈಹಿಂದ್! ಗಾಂಧಿಜೀಯ ನಾಯಕತ್ವದಲ್ಲಿ-ಆ ಅಸಾಮಾನ್ಯ ವಿಭೂತಿ ಪುರುಷನ ಮುಂದಾಳುತ್ವದಲ್ಲಿ-ಈ ರಾಷ್ಟ್ರವು

ಹೂಡಿದ್ದ ಸ್ವಾತಂತ್ರ್ಯ ಸಮರಗಳಿಗೆ ವಿಜಯ ಮಕುಟವೇರುವ ಕಾಲ ವೀಗ ತಾನೇ ಬರುತ್ತಿದೆ. ಭಾರತದಂತಹ ಅಗ್ರಗಣ್ಯ ರಾಷ್ಟ್ರವು ತಲ ತಲಾಂತರಗಳಿಂದ ಅನುಭವಿಸುತ್ತಿದ್ದ ಗುಲಾಮಗಿರಿಯ ಪ್ರತಿಫಲಗಳಾದ ಬಡತನ, ದೈನ್ಯತೆ, ನಿಸ್ಸಹಾಯಕತೆಗಳೆಲ್ಲಾ ತೊಲಗಿ, ಹಿಂದೀಯರು ನವಚೇತನಮಯಿ ಜನಾಂಗವಾಗಿ ತಲೆಯೆತ್ತುವ ಕಾಲ ಕಣ್ಣ ಮುಂದಿದೆ. ಭೇಷ್! ಭಾರತ ರಾಷ್ಟ್ರದ ಪಾಲಿನ ಸುಪ್ರಭಾತವಿದು.

ಪದ್ಯ:— ನಮ್ಮಿಂದಲೇ ನಮ್ಮ ಸ್ವಾತಂತ್ರ್ಯ ಬುಗ್ಗೆಯು । ಚಿಮ್ಮು ವಂತಾಗಬೇಕು ॥ ಒಮ್ಮತದಿಂದಲಿ ಮಂತ್ರಿತ್ರಯರ ಮುಂದೆ । ಮು ಮ್ಮಾತು ಮುಗಿಸಬೇಕು ॥ ೩ ॥

ನೆಹರು—ನಮ್ಮ ಅದೃಷ್ಟ ನಿರ್ಮಾಪಕರು—ನಮ್ಮ ಸ್ವಾತಂತ್ರ್ಯದ ಆಕಾರ ಕೆತ್ತುವ ಶಿಲ್ಪಿಗಳು ನಾವೇ ಹೊರತು ಬ್ರಿಟಿಷರಲ್ಲ ಆದ್ದರಿಂದ ಮುಸ್ಲಿಂ ಲೀಗಿನೊಡನೆ ಒಮ್ಮತದ ಒಪ್ಪಂದವಾಗುವಂತೆ ಪ್ರಯತ್ನಿಸಿ, ಈಗ ಬಂದಿರುವ ಬ್ರಿಟಿಷ್ ಮಂತ್ರಿತ್ರಯರ ಮುಂದೆ ಕಾರ್ಯದ ಪೀಠಿ ಕೆಯನ್ನು ನಾವೇ ಹಾಕಬೇಕಾಗಿದೆ. ಅದಕ್ಕಾಗಿ ಸರ್ದಾರ್ ವಲ್ಲಭಾಯಿ, ಮೌಲಾನಾ ಅಜಾದ್, ಬಾದಶಹಾ ಅಬ್ದುಲ್ ಗಫರ್‌ಖಾನರೊಂದಿಗೆ ಸಮ್ಮೇಲನಕ್ಕೆ ನಡೆದು ಬಿಡುತ್ತೇನೆ. ಜೈಹಿಂದ್!

ಪದ್ಯ:- (ಧಾಟಿ- ಕೇಳಯ್ಯ । ಮಂತ್ರಿ । ಕೇಳಯ್ಯಾ ॥ ಕೇಳಯ್ಯಾ ಮಂತ್ರಿ ನಾ ಪೇಳುವ ನುಡಿಯಾ)

ಸಾಗಿತು । ಸಭೆ ಸಾಗಿತು ॥ ಸಾಗಿತು ಸಭೆಯೊಂದು ವಾರ ಸಿಮ್ಲ ದಲ್ಲಿ । ಆಗದು ಒಪ್ಪಂದ ಇತ್ತಂಡಗಳಲಿ ॥ ಸಾಗಿತು ॥ ೧ ॥

ಕ್ರಿಪ್ಸ್—ಕಾಂಗ್ರೆಸ್ ಲೀಗುಗಳ ಮಾನ್ಯ ನಾಯಕರೇ; ಇಷ್ಟು ದಿನ ಸಭೆ ಸೇರಿ ಪರ್ಯಾಲೋಚಿಸಿದರೂ, ಇಕ್ಕಡೆಯವರಾದ ನಿಮ್ಮೊಳ ಗೊಂದು ಒಪ್ಪಂದವಾಗದ ದೆಸೆಯಿಂದ ಮುಂದೇನು ಮಾಡಲಿ ಎಂಬುದೇ ನಮಗೆ ಹೊಳೆಯದು. ಬ್ರಿಟಿಷ್ ಮಂತ್ರಿ ಸಮಿತಿಯು ಮುಂದೆ ನಾವಾವ ಸೂಚನೆಗಳನ್ನು ಕೊಂಡೊಯ್ದಿಡಲಿ, ಎಂಬುದಾವುದೂ ನಮಗೆ ತೋಚ ದಂತಾಗಿದೆ. ಸಂಗತಿಯು ದಿನದಿನಕ್ಕೆ ಕ್ಷಣಕ್ಷಣಕ್ಕೆ ಬಿಗುಗೊಳ್ಳುವು ದನ್ನೇ ನಾವು ಕಾಣಬೇಕಾಗಿ ಬಂತಲ್ಲಾ!

ಪದ್ಯಃ-ಪಾಕಿಸ್ತಾನವೆ ಬೇಕು ನಮಗಿಂದೆ ಇಂದು । ಏಕಕೇಂದ್ರವ ನೊಪ್ಪಲಾರೆವೆಂದೆಂದು ॥ ಸಾಕು ಮುಗಿಯಲಿನ್ನು ಮಾತಿನ ಬಣ್ಣ । ಏಕಾಗ್ರತೆಯ ಕಾರ್ಯವಿರಲೆಂದ ಜಿನ್ನ ॥ ೨ ॥

ಜಿನ್ನಾ—ಸಮಸ್ಯೆಯೆಲ್ಲಿದೆ? ಎಲ್ಲವೂ ಸ್ಪಷ್ಟವಿವೆ. ಹತ್ತು ಕೋಟಿ ಮುಸಲ್ಮಾನರ ಜೀವನ್ಮರಣದ ಪ್ರಶ್ನೆಯಿದು. ತ್ರಿಕರಣಪೂರ್ವಕವಾಗಿ ಮೂರು ಮೂರು ಬಾರಿ ಸಾರಿ ಹೇಳುತ್ತಿದ್ದೇನೆ. ಪಾಕಿಸ್ತಾನ್ ಬೇಡಿಕೆ ಯಲ್ಲೊಂದೇ ಒಂದು ಕೋಮು ಬದಲಾಯಿಸುವುದಕ್ಕೂ ನಮ್ಮ ಒಪ್ಪಿಗೆಯಿಲ್ಲ. ಇನ್ನೀ ಬಾಯಿ ಹರಟೆಯಿಂದ ಕಾಲಹರಣ ಮಾಡಿ ಫಲವಿಲ್ಲ. ನಮ್ಮ ನ್ಯಾಯಬದ್ಧ ಬೇಡಿಕೆಯನ್ನಾಧರಿಸಿ ಕಾರ್ಯವಾಗುವಂತಿದ್ದರೆ ಮುಂದುವರಿಸೋಣ; ಇಲ್ಲವಾದರೆ ಇಲ್ಲಿಗೇ ಮುಗಿಸೋಣ

ಪದ್ಯಃ-ಹೆತ್ತಾಕೆ ಹೊತ್ತಾಕೆ ಭಾರತ ಮಾತೆ । ಪುತ್ರರೆಲ್ಲರಿಗೊಂದೆ ತಾಯಿಯ ಮಮತೆ ॥ ಒತ್ತಬಹುದೆ ಹೇಳಿ ಜಾತೀಯ ಮೋಹರು। ಕತ್ತರಿಸಲು ಬಿಡೆನೆಂದನು ನೆಹರು ॥ ೩ ॥

ನೆಹರು—ಯಾಕೀ ಅಸಹ್ಯವಾದ! ಇಲ್ಲ; ಒಪ್ಪಲಾರೆ ನಮ್ಮ ಮಾತೃಭೂಮಿ ಭಾರತವು ಹಿಂದು, ಮುಸ್ಲಿಂ, ಸಿಖ್, ಪಾರ್ಶಿ, ಕ್ರೈಸ್ತರೆಲ್ಲರ ತಾಯಿ ಸರ್ವರ ಸಮಾನ ಹಕ್ಕಿನ ರಾಷ್ಟ್ರದ ರಾಜಕೀಯಕ್ಕೆ ಜಾತೀಯತಾ ಮುದ್ರೆಯೊತ್ತಿ, ಮಾತೃಭೂಮಿಯನ್ನು ತುಂಡರಿಸಬೇಕೆಂಬ ಬೇಡಿಕೆಯು ನಮಗೆಂದಿಗೂ ಮಾನ್ಯವಿಲ್ಲ.

ಪದ್ಯಃ-ಅನ್ಯೋನ್ಯ ಸಮ್ಮತಿ ನಿಮ್ಮೊಳಗಿಲ್ಲ। ಭಿನ್ನ ಭಾವನೆಯೊಂದೆ ಮುಂದೆ ಬಂತಲ್ಲ॥ ಇನ್ನೇನು, ನಾವೇ ತೀರ್ಮಾನ ಹೇಳುವೆವು। ಮನ್ನಿಸಬೇಕೆಂದು ಕೇಳಿಕೊಳ್ಳುವೆವು ॥ ೪ ॥

ಅಲೆಕ್ಸಾಂಡರ್—ಹಿಂದೀ ಜನನಾಯಕರೇ; ನಮ್ಮಾಶೆ ಹುಸಿಯಾಯಿತು ಪ್ರಮುಖ ಪಕ್ಷಗಳೆರಡರ ಧುರೀಣರೂ ಒಂದು ಕಡೆಯವರು ಪೂರ್ವಕ್ಕೆಳೆದರೆ ಮತ್ತೊಂದೆಡೆಯವರು ಪಶ್ಚಿಮಕ್ಕೆಳೆಯುತ್ತಿರುವಿರಿ. ನಿಮ್ಮೊಳಗೊಂದು ಒಮ್ಮತವಾಗುವದು ಅಸಾಧ್ಯವೆಂದು ತೋರುತ್ತದೆ ಆದರೆ ಹಿಂದೀಯರು ಬ್ರಿಟಿಷರ ಕುರಿತು ಇದುವರೆಗೆ ಕಟ್ಟಿಕೊಂಡಿರುವ ಶಂಕೆಯಂತೆ, ನಿಮ್ಮೊಳಗಿನ ಈ ಭಿನ್ನಾಭಿಪ್ರಾಯಗಳನ್ನು ಉದ್ರೇಕಿಸುವ

ಕೆಲಸ ಮಾಡಿ ಹೋಗಲು ನಾವೀ ಬಾರಿ ಬಂದವರಲ್ಲ. ನಮಗೊಂದು ತೀರ್ಮಾನ ಹೊಂದಲೇಬೇಕಾಗಿದೆ. ಆದ್ದರಿಂದ ಈಗ ನಾವು ನಮ್ಮ ತೀರ್ಮಾನವನ್ನೇ ಕೊಡಲಿದ್ದೇವೆ ದಯವಿಟ್ಟು ನೀವಿಕ್ಕಡೆಯವರೂ ಹಿಂದೀ ರಾಷ್ಟ್ರವೂ ಅದನ್ನಂಗೀಕರಿಸುವಿರೆಂದು ನಿರೀಕ್ಷಿಸುತ್ತೇವೆ.

ಪದ್ಯ:-(ವಾರ್ಧಿಕ್ಯ ಷಟ್ಪದಿ.)

ಏಕಕೇಂದ್ರವು, ಮೂರು ಪ್ರಾಂತ್ಯಗಳ ಗುಂಪು, ಪ್ರ | ತ್ಯೇಕ
ಘಟನಾ ರಚನೆ ಗುಂಪುಗಳ ಹಕ್ಕಿನದು | ಲೋಕಸಂಬಂಧ, ರಕ್ಷಣೆ,
ಜೋಡಣೆಯ ಖಾತೆ ಮಾತ್ರವಿನ್ನೀ ಕೇಂದ್ರಕೆ ॥

ಪೆಥಿಕ್—ಹಿಂದೀ ನಾಯಕರೇ; ಸರ್ವ ಭಾರತೀಯರೇ, ಆಲಿಸಬೇಕು. ಈ ೧೯೪೬ ಮೇ ೧೬ನೇ ತಾರೀಕಿನಲ್ಲಿ ನಾವು ಮುಂದಿಡುವ ಯೋಜನೆಯಿದು. ಅಖಿಲ ಭಾರತಕ್ಕೆ ಒಂದೇ ಕೇಂದ್ರವಿರಬೇಕು. ಆದರೆ ಆ ಕೇಂದ್ರಕ್ಕೆ ವಿದೇಶಸಂಬಂಧ, ದೇಶರಕ್ಷಣೆ, ಸಂಚಾರ ಟಪ್ಪಾಲು ಇತ್ಯಾದಿ ಜೋಡಣೆಖಾತೆಗಳು ಮತ್ತು ಇವುಗಳ ವೆಚ್ಚಕ್ಕೆ ಬೇಕಾಗುವಷ್ಟೇ ಹಣಕಾಸಿನ ಅಧಿಕಾರ ಮಾತ್ರ ಇರುತ್ತದೆ. ಹಿಂದುಸ್ಥಾನದ ೧೧ ಪ್ರಾಂತ್ಯಗಳನ್ನು ಎ-ಬಿ-ಸಿ ಎಂಬ ಮೂರು ಪ್ರಾಂತಿಕ ಗುಂಪುಗಳಾಗಿ ವಿಂಗಡಿಸಬೇಕು 'ಎ' ಗುಂಪಿನಲ್ಲಿ ಮದ್ರಾಸ್, ಬೊಂಬಾಯಿ, ಬಿಹಾರ್, ಒರಿಸ್ಸಾ, ಮಧ್ಯಪ್ರಾಂತ್ಯ, ಸಂಯುಕ್ತಪ್ರಾಂತ್ಯಗಳಿವೆ 'ಬಿ' ಗುಂಪಿನಲ್ಲಿ ಪಂಜಾಬ್, ಸಿಂಧ್, ಗಡಿನಾಡು ಪ್ರಾಂತ್ಯಗಳವೆ 'ಸಿ' ಗುಂಪಿನಲ್ಲಿ ಬಂಗಾಳ, ಅಸ್ಸಾಮುಗಳಿವೆ. ತಮ್ಮ ಪಂಗಡಕ್ಕೆ ಸೇರಿದ ಪ್ರಾಂತ್ಯಗಳಿಗೆ ರಾಜ್ಯಾಂಗ ತಯಾರಿಸುವುದು, ಅಗತ್ಯ ಕಂಡಲ್ಲಿ ಗುಂಪು ಕೇಂದ್ರವನ್ನು ಪ್ರತ್ಯೇಕ ರಚಿಸುವದು, ಆಯಾಯಾ ಗುಂಪುಗಳ ಅಧಿಕಾರಕ್ಕೆ ಸೇರುತ್ತದೆ. ಕೇಂದ್ರಕ್ಕೆ ಬಿಡಲ್ಪಟ್ಟ ಮೂರು ಖಾತೆಗಳ ಹೊರತು ಉಳಿದೆಲ್ಲಾ ಅಧಿಕಾರಗಳೂ ಈ ಪ್ರಾಂತಿಕ ಗುಂಪುಗಳಿಗಿವೆ. ಆಯಾಯ ಪ್ರಾಂತ್ಯವು ಆಯಾಯ ಗುಂಪಿಗೊಮ್ಮೆ ಸೇರಬೇಕು. ಆ ಮೂಲಕ ರಚಿಸಲ್ಪಡುವ ಘಟನೆಯಂತೆ ಕೂಡಲೇ ನಡೆಯುವ ಚುನಾವಣೆಯಲ್ಲಿ ಬರುವ ಪ್ರಾಂತಿಕ ಎಸೆಂಬ್ಲಿಗಳಿಗೆ ಗುಂಪಿನೊಳಗಿರುವ ಅಥವಾ ಹೊರಡುವ ಹಕ್ಕಿದೆ. ಮುಂದಿನ ಹತ್ತು ವರ್ಷ

ಗಳಿಗೊಮ್ಮೆ ಅವು ಈ ನಿರ್ಧಾರವನ್ನು ತಮ್ಮಿಚ್ಛೆಯಂತೆ ಬದಲಾಯಿಸಿ ಕೊಳ್ಳಬಹುದು. ಇದೀಗ ನಾವು ರೂಪಿಸುವ ಶಾಶ್ವತ ವ್ಯವಸ್ಥೆ.

ಪದ್ಯ:-ಈ ಕಾಲಕೊಂದು ನಡುಗಾಲ ಸರಕಾರ, ಪೂ। ರ್ಣಕಾರ ರೂಪಿಸಲು ಘಟನಾ ಸಮಿತಿ ರಚನೆ। ಏಕ ಮಿಲಿಯಕ್ಕೊಬ್ಬನಂತೆ ಪ್ರತಿ ನಿಧಿಯಿರಲಿ, ಭಾರತವು ಗುರಿಮುಟ್ಟಲಿ ॥ ೧ ॥

ಅಲೆಕ್ಸಾಂಡರ್—ಸದ್ಯ ಕೇಂದ್ರದಲ್ಲಿ ಜನಪ್ರನಿಧಿ ಸರಕಾರವಿರ ಲಾಗುವಂತೆ ಹಿಂದೀ ಧುರೀಣರುಳ್ಳ ನಡುಗಾಲ ಸರಕಾರವನ್ನು ಸ್ಥಾಪಿಸ ಲಾಗುವದು ನಾವಿಲ್ಲಿ ಸೂಚಿರುವ ಚೌಕಟ್ಟನ್ನಾಧರಿಸಿ ರಾಜ್ಯಾಂಗ ಶಾಸನಗಳನ್ನು ರಚಿಸುವರೆ ಒಂದು ಘಟನಾ ಸಮಿತಿಯನ್ನು ನಿರ್ಮಿಸಲಾ ಗುವದು. ಆ ಸಮಿತಿಗೆ ಜನಸಂಖ್ಯೆಯ ಮಿಲಿಯಮಂದಿಗೊಬ್ಬನಂತೆ ಪ್ರತಿನಿಧಿಗಳನ್ನು ಪ್ರಾಂತಿಕ ಎಸೆಂಬ್ಲಿಗಳಾರಿಸಿದರಾಯಿತು. ಇದೀಗ ನಾವು ಮುಂದಿಡುವ ಯೋಜನೆ; ಸದ್ಯಸ್ಥಿತಿಯಲ್ಲಿ ಅತ್ಯಂತ ಯೋಗ್ಯ ವಾದ ನಿರೂಪಣೆ. ನೀವಿಕ್ಕಡೆಯುವರೂ ಇದನ್ನಂಗೀಕರಿಸಿ ಈ ಘನ ರಾಷ್ಟ್ರದ ಗುರಿ ಹಾಗೂ ಭವಿಷ್ಯವಾಗಿರುವ ಸ್ವಾತಂತ್ರ್ಯ ಮತ್ತು ಉತ್ತ ರೋತ್ತರ ಅಭಿವೃದ್ಧಿಯನ್ನು ಸಾಧಿಸಿರೆಂದು ನಾವು ಅಂತಃಕರಣಪೂರ್ವಕ ವಾಗಿ ಹಾರೈಸುತ್ತೇವೆ

ಪದ್ಯ:-(ಧಾಟಿ-ಕೋಮಲಾಂಗಿ ಕೇಳೇ। ಮದಗಜ | ಗಾಮಿನಿ)

ನವಯೋಜನೆಯಹುದು। ಕಾಂಗ್ರೆಸಿ।ನವಸರ ಸಭೆ ಕರೆದು॥ಸವಿವರ ಚರ್ಚಿಸಿ ನಮ್ಮಭಿಮತವನು|ವಿವರಿಸಿ ತಿಳುಹುವೆವೆಂದನು ನೆಹರುವು ॥೧॥

ನೆಹರು—ಈ ಯೋಜನೆಯು ಹೊಸತು; ಒಂದು ರಾಷ್ಟ್ರದ ಭವಿ ಷ್ಯವೇ ಇದರಲ್ಲಡಗಿದೆ; ೪೦ ಕೋಟಿ ಜನತೆಯ ಹಣೇಬರವನ್ನಿಸಲು ಇದು ಬದ್ಧವಿದೆ. ಇಂತಹ ಪ್ರಾಮುಖ್ಯ ವಿಷಯದ ಕುರಿತು ನಾವೀಗಲೇ ಕಾಂಗ್ರೆಸಿನ ನಿರ್ಧಾರವನ್ನು ತಿಳಿಸುವದಸಾಧ್ಯ. ಆದ್ದರಿಂದ ಇದರ ಕೂಲಂಕುಷ ಪರ್ಯಾಲೋಚನೆ ನಡೆಸಿ, ಕಾಂಗ್ರೆಸಿನ ಅಧಿಕೃತ ಅಭಿಮತ ವನ್ನೇ ತಿಳಿಸುವದಕ್ಕಾಗಿ ಅ. ಭಾ. ಕಾಂಗ್ರೆಸ್ ಸಮಿತಿಯ ಅವಸರದ ಸಭೆ ಕರೆಯುತ್ತೇವೆ. ಮೇ ೧೬ರ ಈ ಘೋಷಣೆಯನ್ನು ಅಲ್ಲಿ ಚರ್ಚಿಸಿ, ನಿರ್ಧರಿಸಿ, ತಿಳಿಸುತ್ತೇವೆ.

ಪದ್ಯ–ಸರಿಕಡಿ ಕೇಳಿಹೆವು।ಆದರು।ಗೆರೆ ಮಾತ್ರವ ನೀವು॥ಕೊರೆದಿಹಿ ರಾದರು ಲೀಗಿನ ಸಭೆಯನು | ಕರೆವೆವು ತಿಳಿಸುವೆವೆಂದನುಜಿನ್ನನು ||೨||

ಜಿನ್ನಾ ನಾವು ಕಡಿ ತುಂಡಾದ ಪಾಲನ್ನು ಕೇಳಿದ್ದರೆ, ನೀವಿಲ್ಲಿ ಪ್ರಾಂತಿಕ ಪಂಗಡಗಳ ಗೆರೆಯನ್ನಷ್ಟೇ ಎಳೆದು ತೋರಿಸಿದ್ದೀರಿ. ನಮ್ಮ ಯೋಚನೆಗಿಂತ ಬಹಳ ದೂರದಲ್ಲೇ ನಿಮ್ಮ ಯೋಜನೆ ನಿಂತಿದೆ. ಆದರೂ ಒಂದು ರಾಜೀ ತೀರ್ಮಾನದಲ್ಲಿ ರೂಪಾಯಿಯಲ್ಲಿ ಹದಿನಾರಾಣೆಯೂ ಯಾವುದೊಂದು ಪಕ್ಷಕ್ಕೂ ದೊರೆಯಲಾರದೆಂಬ ವ್ಯವಹಾರ ಕ್ರಮ ನಮಗೆ ತಿಳಿದೇ ಇದೆ. ಹೇಗಿದ್ದರೂ ಹತ್ತು ಕೋಟಿ ಮುಸಲ್ಮಾನರ ಭವಿಷ್ಯವನ್ನು ರೂಪಿಸುವ ಕೆಲಸವಿದಾದ್ದರಿಂದ, ಗಾಢ ಪರ್ಯಾಲೋಚನೆ ನಡಿಸಿ ಅಧಿಕೃತ ನಿರ್ಧಾರವನ್ನು ತಿಳಿಸಲಾಗುವಂತೆ ಮುಸ್ಲಿಂ ಲೀಗ್ ಕೌನ್ಸಿಲಿನ ಸಭೆ ಕರೆಯುತ್ತೇನೆ. ನಿರ್ಣಯವನ್ನು ಕೊನೆಗೆ ತಿಳಿಸಲಾಗುವುದು.

## ದೃಶ್ಯ ೪

(ಒಡ್ಡೋಲಗ—ಅ ಭಾ ಕಾಂಗ್ರೆಸ್ ಕಮಿಟಿ ಸಭೆ)

ಪದ್ಯ:--(ಭಾಮಿನಿ ಷಟ್ಪದಿ)

ನೆರೆದುದೈ ಬೊಂಬಾಯಿಯಲಿ ಸಡ। ಗರದೊಳಾ ರಾಷ್ಟ್ರೀಯ ಸಭೆಯು | ಬ್ಬರದ ಸ್ಫೂರ್ತಿಯ ರಾಷ್ಟ್ರಪ್ರೇಮದ ಗಂಡುಗಲಿ ಕೂಟ ॥

ಮೌಲಾನಾ ಅಜಾದ್—ಸ್ವಾತಂತ್ರ್ಯಕ್ಕೆ ಜಯವಾಗಲಿ ಕಾಲ ಚಕ್ರವೇನೋ ರಭಸದಿಂದ ಸುತ್ತು ತೆಗೆಯುಹತ್ತಿದೆ. ಬ್ರಿಟಿಷ್ ಮಂತ್ರಿ ಸಮಿತಿಯ ಮೇ ತಾ. 16ರ ಯೋಜನೆಗೆ ನಮ್ಮ ಕಾಂಗ್ರೆಸ್ ಕಾರ್ಯಕಾರೀ ಸಮಿತಿಯ ಒಪ್ಪಿಗೆಯನ್ನು ಇಷ್ಟರಲ್ಲೇ ಪಡೆದಿದ್ದೇವೆ. ಅತ್ತ ಮುಸ್ಲಿಂ ಲೀಗ್ ಕೌನ್ಸಿಲು ಅದನ್ನು ಮಂಜೂರು ಮಾಡಿಕೊಂಡರೂ ಸಮಸ್ಯೆಗಳನ್ನೂ ಭಿನ್ನಾಭಿಪ್ರಾಯಗಳನ್ನೂ ಎಬ್ಬಿಸಿದೆ. ಇವುಗಳೆಲ್ಲವುಗಳ ಪರ್ಯಾಲೋಚನೆ ಮತ್ತು ಅದಕ್ಕನುಗುಣವಾದ ಮಂಜೂರಾತಿಗಾಗಿ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸಭೆ ಕರೆದಿದ್ದೇನೆ. ನೆರೆದಿರುವ ದೇಶ ಭಾಂಧವರೇ. ನಿರ್ವಿಕಾರ ಬುದ್ಧಿಯಿಂದ ಎಲ್ಲಾ ಸಂಗತಿಗಳನ್ನೂ ಅಂಶ ಬಿಡದೆ ಆಲೋಚಿಸಿ ನೋಡಿರೆಂದು ಕೇಳಿಕೊಳ್ಳುತ್ತೇನೆ. ನಾವು

ಹಲವು ಬಾರಿ ಹೋರಾಡಿದ್ದ—ತ್ಯಾಗ, ಕಷ್ಟನಷ್ಟಗಳನ್ನನುಭವಿಸಿದ್ದ— ಆ ಸ್ವಾತಂತ್ರ್ಯವೀಗ ಎದ್ದು ಬರುವ ಲಕ್ಷಣಗಳು ಕಾಣಿಸುತ್ತಿವೆ. ಬ್ರಿಟಿಷ್ ಮಂತ್ರಿ ಸಮಿತಿ ಯೋಜನೆಯು ಈ ಸ್ವಾತಂತ್ರ್ಯ ಕಟ್ಟಡದ ಅಸ್ತಿವಾರ ವಾಗಲೀ ನಾವೀ ಸಂದರ್ಭವನ್ನು ಸದುಪಯೋಗಿಸಿಕೊಳ್ಳೋಣ

ಪದ್ಯ:-ಪರಿಯನೆಲ್ಲವ ತಿಳಿಸಿ ಮೌಲಾ । ನರು, ಠರಾವನು ತರಲು ನೆಹರುವ । ಕರೆಯೆ; ಸಭೆ ಚಪ್ಪಾಳೆ ಹೊಡೆಯಿತು ಘೋಷವೆಬ್ಬಿಸಿತು॥೧॥

ಆಜಾದ್—ಬಂಧುಗಳೇ, ಹೋರಾಟವೆಂಬುದು ನಮ್ಮ ಅಸ್ತ್ರ ಮಾತ್ರ; ಶಾಶ್ವತವಾಗಿ ಧರಿಸಿಕೊಳ್ಳುವ ಆಭರಣವೇ ಅದಲ್ಲ ಅದೊಂದು ವಿಧಾನ; ಗುರಿಯೇ ಅದಲ್ಲ ಪರಿಸ್ಥಿತಿಯು ಬೇಗೆಯಲ್ಲಿ ಬೆಂದು ಹಣ್ಣಾದ ಬ್ರಿಟಿಷರು ತಾವಾಗಿ ಸದ್ದಾರಿಗೆ ಬಂದು ಸ್ವಾತಂತ್ರ್ಯವನ್ನೀಯಲು ಕೈಯೆತ್ತುವ ಸಂದರ್ಭದಲ್ಲಿ ನಮ್ಮ ಹಕ್ಕಿನ ಅದನ್ನು ಪಡೆಕೊಳ್ಳಲು ನಾವೂ ಶಂಕೆವಿನಹ ಕೈಚಾಚಬೇಕು. ಆದ್ದರಿಂದ ನೀವೀ ಬ್ರಿಟಿಷ್ ಯೋಜನೆಯನ್ನು ಅಂಗೀಕರಿಸುವಿರೆಂದು ನಂಬುತ್ತೇನೆ ಆ ಸಂಬಂಧವ ಠರಾವನ್ನು ಮುಂದಿಡಲು ಪಂಡಿತ ನೆಹರುಗಳನ್ನು ಅಹ್ವಾನಿಸುತ್ತೇನೆ.

ಪದ್ಯ:—(ಧಾಟಿ—ಬಂದನು ದೇವರದೇವಾ । ಬೆಂಬಿಡದೆ ಭಕ್ತರ ಕಾವಾ)

ತಂದನು ಸೂಚನೆ ನೆಹರು । ಹಿಂದೀ ಸ್ವಾತಂತ್ರ್ಯಗುರು ॥ ಮುಂದಿನ ಗುಂಪಿಗೆ ಪ್ರಾಂತ್ಯದ ಹಕ್ಕನು । ತಿಂದು ತೇಗುವ ಸಂ । ಬಂಧ ವಿಲ್ಲೆನ್ನುತ ॥ ೧ ॥ ತಂದನು ॥

ನೆಹರು-ರಾಷ್ಟ್ರಯೋಧರೇ, ನಾನೀಗ ಬ್ರಿಟಿಷ್ ಮಂತ್ರಿ ಸಮಿತಿಯ ಮೇ 16ರ ಯೋಜನೆಯನ್ನಂಗೀಕರಿಸುವ ಠರಾವನ್ನು ನಿಮ್ಮ ಮುಂದಿಡುತ್ತೇನೆ ನಾವದನ್ನು ಸ್ವಾಗತಿಸುತ್ತೇವೆ ಆದರೆ ಪ್ರಾಂತಿಕ ಪಂಗಡಗಳಲ್ಲಿ ಸೇರುವ ಅಥವಾ ಸೇರದಿರುವ ಹಕ್ಕು ಪ್ರತಿಯೊಂದು ಪ್ರಾಂತ್ಯಕ್ಕಿದೆ, ಎಂಬುದೇ ಆ ಬ್ರಿಟಿಷ್ ಯೋಜನೆಯಲ್ಲಿರುವ ಅರ್ಥವೆಂಬ ನಮ್ಮ ಅಭಿಪ್ರಾಯವನ್ನಿಲ್ಲಿ ಸ್ಪಷ್ಟಪಡಿಸಬೇಕಾಗಿದೆ ಯಾರ ಮೇಲೂ ಒತ್ತಾಯವಿರಕೂಡದು. ಅಂತೆಯೇ ಒಂದು ಪ್ರಾಂತ್ಯದ ಹಕ್ಕನ್ನು ಕಸಗೊಳ್ಳಲಾಗುವ ಯಾವ ವಿಧಾನವೂ ಅದರಲ್ಲಿಲ್ಲವೆಂದು ನಾವು ನಂಬುತ್ತೇವೆ.

ಪದ್ಯ:-ಸಂದಿಹ ಕಾಲವ ಮರೆತು | ಮುಂದಿನಕಾರ್ಯವನರಿತು ॥ ಒಂದೇ ಮನದಿ ಜಯು | ಹಿಂದ ಎನ್ನುತ ಗೆಲ | ಎಂದ ಗುರಿಯು ಕಡೆ ಮುಂದುಮುಂದೊತ್ತುವ || ೨ ||

ನೆಹರು—ಸತ್ತ ಶವವು ಸಮಾಧಿಗೇನೇ ಯೋಗ್ಯ; ಗತಕಾಲವನ್ನು ಮರೆತುಬಿಡುವುದೇ ನ್ಯಾಯ. ಎಷ್ಟೇ ದೋಷಗಳಿದ್ದರೂ ಈ ಯೋಜನೆ ಯಲ್ಲಿ ನಮ್ಮ ತಲೆ, ಹೃದಯುಗಳನ್ನು ತುಂಬಿಸಿ ನಮ್ಮ ಗುರಿಯಾದ ಸರ್ವ ಸಮಾನತಾ ಪೂರ್ಣ ಸ್ವಾತಂತ್ರ್ಯದ ರೂಪವನ್ನಿದಕ್ಕೆಕೊಡಲು ಸಾಧ್ಯವಿದೆ· ಹಾಗೆಂದೇ ನಮ್ಮ ಕಾರ್ಯಕಾರೀ ಸಮಿತಿಯು ಅದನ್ನಂಗೀಕರಿಸಿದೆ. ಆದ್ದರಿಂದ ಸಭೆಯು ಈ ಠರಾವನ್ನು ಸ್ವೀಕರಿಸುವವೆಂದು ನಂಬುತ್ತೇನೆ·

ಪದ್ಯ: ಇದರನುಮೋದಕ ಧೀರ | ಕದನಪಟು ಸರದಾರ|| ಬೆದರ ದಿರೀ ಯೋಜನೆಯುನು ಕುದುರಿಸಿ | ಒದಗಿಸಿಕೊಳುವ ಅಖಂಡತೆ ಯೆಂದನು || ೩ ||

ವಲ್ಲಭಾಯಿ—ನಾನೀ ಸೂಚನೆಯನ್ನು ಅನುಮೋದಿಸುತ್ತೇನೆ. ಬ್ರಿಟಿಷರ ಈ ಸೂಚನೆಯು ದೋಷಮಯಿಯಿರಬಹುದು ಬ್ರಿಟಿಷರು ನಿರ್ದೋಷಿಗಳಾಗಿದ್ದ ಸಂದರ್ಭವೆಂದಾದರಿತ್ತೆ? ನಮ್ಮ ಸ್ವಾತಂತ್ರ್ಯವನ್ನು ರೂಪಿಸಿಕೊಳ್ಳುವವರು ನಾವೇ. ಆದ್ದರಿಂದ ಬ್ರಿಟಿಷ್ ಸರಕಾರದ ಈ ಪೊಗ್ಗು ಯೋಜನೆಯನ್ನು ನಾವು ನಮಗೆ ಬೇಕಾದಂತೆ ಅರಳಿಸಿ ಅಖಂಡ ರಾಷ್ಟ್ರದ ಅಜೇಯ ಸ್ವಾತಂತ್ರ್ಯವನ್ನು ಕಡೆಯೋಣ ಈ ಪ್ರಾಂತಿಕ ಪಂಗಡ ಪದ್ಧತಿಯ ಮೇಲೆ ಏಕ ಕೇಂದ್ರದ ಸುದೃಢ ಶಿಖರವೇರಿಸಿದೆ ವಾದರೆ ನಮ್ಮೆಲ್ಲಾ ಬಯಕೆಯೂ ಫಲಿಸಿದಂತೆಯೇ ಸರಿ ಆದ್ದರಿಂದ ಇದನ್ನಂಗೀಕರಿಸಿರೆನ್ನುತ್ತೇನೆ.

ಪದ್ಯ:-ನಮ್ಮದಿದು ಕಡು ಸೋಲು | ಸಮ್ಮತವೇ ಈ ಹೋಳು || ದುರ್ಮತಿ ಬ್ರಿಟಿಷರು ಬೀಸಿದ ಬಲೆಯಿದು | ಸುಮ್ಮಗೆ ಬೀಳದಿರೆಂದ ನಾರಾಯಣ || ೪ ||

ಜೈಪ್ರಕಾಶ್ ನಾರಾಯಣ—ಈ ಸೂಚನೆಯನ್ನು ಒಪ್ಪಿಕೊಳ್ಳುವ ದೆಂದರೆ ಅಪಜಯವನ್ನು ಅಪ್ಪಿಕೊಂಡಂತೆಯೇ. ರಾಷ್ಟ್ರವನ್ನು ಮೂರು ಗುಂಪುಗಳಾಗಿ ವಿಂಗಡಿಸಿ ಎಲ್ಲಾ ಮುಖ್ಯಾಧಿಕಾರಗಳನ್ನೂ ಅವುಗಳಿಗೆ

ಕೊಟ್ಟಿರುವ ಈ ತ್ರಿವಿಧಾನವೇ ಹಿಂದೀ ರಾಷ್ಟ್ರೀಯತೆಯನ್ನಿರಿದು ಕೊಲ್ಲುವ ತ್ರಿಶೂಲ. ಇಡೀ ಯೋಜನೆಯೆಂಬುದು ಸಾಮ್ರಾಜ್ಯಶಾಹೀ ಬ್ರಿಟನು ನಮ್ಮ ಮುಂದೊಡ್ಡಿರುವ ಬಲೆ. ಹಿಂದು ಮುಂದಿನ ಯೋಚನೆಯಿಲ್ಲದೆ ನಾವದರಲ್ಲಿ ಬೀಳಬೇಕೆ? ಈ ಬ್ರಿಟಿಷ್ ಬಲೆಯೇ ನಮ್ಮ ಪಾಲಿನ ಭಾಗ್ಯವಾಗುವದೆಂಬುದು ಶುದ್ಧ ಭ್ರಮೆ, ಆತ್ಮ ವಂಚನೆ, ಅಪಾಯಕರ ಅಜ್ಞಾನ!

ಪದ್ಯ:-ಹೊರಡುವರೇ ಸ್ವಾರ್ಥಿಗಳು.| ಹರಟೆಯಿದು ಹಸಿ ಸುಳ್ಳು॥ ವರುಷಾವಧಿ ದಿನಹರಣವ ಮಾಡಲು | ಉರುಲಿಟ್ಟರು ನಾವಿದ ಹರಿದೊಗೆಯುವ || ೫ ||

ಜೈಪ್ರಕಾಶ್—ಬ್ರಿಟಿಷರು ಗಂಟುಮೂಟೆ ಕಟ್ಟುತಿದ್ದಾರಂತೆ! ಸುಳ್ಳು; ಅವರೆಂದೂ ಅದನ್ನು ಕಟ್ಟಿ ಮುಗಿಸಲಾರರು ಅವರಿಲ್ಲಿ ಮಾಡಿಟ್ಟಿರುವ ಆ ಗಂಟುಮೂಟೆಗಳು ಹಲವು ವರುಷಗಳ ವರೆಗೆ ಕಟ್ಟಿದರೂ ಮುಗಿಯದಷ್ಟಿವೆ ಎಂಬುದನ್ನು ನಾವು ಮರೆಯಕೂಡದು. ಸ್ವಾರ್ಥಿ ಬ್ರಿಟಿಷರು ಸ್ವಂತೇಚ್ಛೆಯಿಂದ ಎಂದಿಗೂ ಇಲ್ಲಿಂದ ಕಾಲ್ದೆಗೆಯಲಾರರು. ನಮ್ಮೊಳಗೆ ಬಡಿದಾಟ ನಿರ್ಮಿಸಿ ಇಲ್ಲಿಯೇ ಕಾಲಹರಣ ಮಾಡಲು ಬ್ರಿಟಿಷ್ ಸರಕಾರವು ಸಿಕ್ಕಿಸಿರುವ ಈ ಉರುಲೊಳಗೆ ಯಾರೂ ಬೀಳಬಾರದೆಂದೂ ನೆಹರು ಸೂಚನೆಯನ್ನು ಸಭೆ ನಿರಾಕರಿಸಬೇಕೆಂದೂ ನಾನು ಕೇಳಿಕೊಳ್ಳುತ್ತೇನೆ.

ಪದ್ಯ:- ನೆಹರು ಸೂಚನೆಗಾಯ್ತು । ಬಹುಮತವು ಪಾಸಾಯ್ತು || ವಹಿಸಿತು ಸಭೆ ಮಧ್ಯಾವಧಿ ಪದ ನಿ । ರ್ವಹಣವ, ಘಟನಾ ಸಮಿತಿಯ ಕಾರ್ಯವ || ೬ ||

ಅಧ್ಯಕ್ಷ ಅಜಾದ್-ವೋಟಿಗೆ ಹಾಕಿದಾಗ ಬ್ರಿಟಿಷ್ ಯೋಜನೆಯನ್ನಂಗೀಕರಿಸುವ ನೆಹರು ಸೂಚನೆಗೆ ಪ್ರಬಲ ಬಹುಮತ ದೊರೆತಿದೆ ಮುಂದಿನ ನಡುಗಾಲ ಸರಕಾರ ರಚನೆಯಲ್ಲಿ ಭಾಗವಹಿಸುವ ಮತ್ತು ಘಟನಾ ಸಮಿತಿ ಸೇರಿಸುವ ಹೊಣೆಯ ಸ್ವೀಕಾರದ ನಿರ್ಧಾರಗಳನ್ನೂ ಸಭೆಯೀಗ ಮಾಡಿದ ಹಾಗಾಯಿತು. ಇನ್ನು ಮುಂದಿನ ಕಾರ್ಯಗಳಲ್ಲಿ ಪ್ರವೃತ್ತರಾಗೋಣ; ಸಭೆ ಮುಗಿಯಿತು. ವಂದೇ ಮಾತರಂ

(ಒಡ್ಡೋಲಗ. ಅ. ಭಾ. ಮುಸ್ಲಿಂ ಲೀಗ್ ಕೌನ್ಸಿಲ್ ಸಭೆ)

ಪದ್ಯ:-(ಧಾಟಿ- ಅರಸ ಕೇಳಿತ್ತಲು ಸುಯೋಧನ | ಕರೆಸಿ ಗುರು)

ಇತ್ತ ಸೇರಿತು ಲೀಗು ಕೌನ್ಸಿಲು | ಗೊತ್ತು ಗುರಿ ನಿರ್ಧರಿಸೆ ಜಿನ್ನನು | ಉತ್ತಮಾಸನವೇರೆ ಸಭೆ ಧ್ವನಿ | ಯೆತ್ತಿತಾಗ || ೧||

ಜಿನ್ನಾ—ಏನಿದು ಕಾಲಗತಿ! ಕಪಟಗಳ ವಿಕಟ ತಾಂಡವ ನೃತ್ಯದ ರಂಗವಾಗಿ ಹೋಯಿತೇ ಹಿಂದೀ ರಾಜಕೀಯ! ಅಧಿಕಾರ ಬ್ರಿಟಿಷ್ ಸ್ವಾರ್ಥಿಗಳೂ, ಪಾಶವಿಕ ಬಹುಮತದ ಹಿಂದೂ ಕಾಂಗ್ರೆಸ್ ವಂಚಕರೂ ಒಂದಾಗಿ ಲೀಗನ್ನು ಸುಳಿಯಲ್ಲಿ ಸಿಕ್ಕಿಸಲು ಪ್ರಯತ್ನಿಸುವಂತಿದೆ. ಬಿಟ್ಟೇನೇ? ಲೀಗ್ ಕೌನ್ಸಿಲಿನ ಸಭೆ ಕರೆದು ಹೋರಾಟ ನಿರ್ಧಾರ ಮಾಡಿಸಿ ಬಿಡುತ್ತೇನೆ. ಇನ್ನು ಕಪಟಾಚರಣೆಗಳಿಗೆ ಪ್ರತಿಯಾಗಿ ಕಾಳಗ- ಪ್ರಾಂತಿಕ ಪಂಗಡಗಳ ಬದಲಿಗೆ ಪಾಕಿಸ್ತಾನ-ಸಡಿಲು ಸಂಬಂಧದ ಬದಲಿಗೆ ಸಂಪೂರ್ಣ ಪ್ರತ್ಯೇಕವಾದ ಸ್ಪಷ್ಟ ಪಾಲೇ ಸರಿ!

ಪದ್ಯ:-ಕಂಡಿರಾ ಕಪಟವನು ದ್ವೇಷದ | ಕೆಂಡ ಜ್ವಲಿಸಿದ ತೆರದೊ ಳಾವ್ ಕೈ|ಕೊಂಡ ವಿನಯುವ ಮರೆತು ನುಡಿವರು | ಭಂಡು ಮಾತ||೨||

ಜಿನ್ನಾ—ಲೀಗ್ ಕೌನ್ಸಿಲ್ ಸಭಿಕರೇ, ಧರ್ಮ ಬಂಧುಗಳೇ. ನೋಡಿದಿರಾ, ಬ್ರಿಟಿಷ್ ಸರಕಾರ ಮತ್ತು ಹಿಂದೂ ಕಾಂಗ್ರೆಸಿನವರಾಡು ತ್ತಿರುವ ಕಪಟನಾಟಕಗಳನ್ನು! ದೇಶದಲ್ಲಿ ದ್ವೇಷದಾವಾಗ್ನಿ ಹಬ್ಬು ವದನ್ನು ತಡೆಗಟ್ಟಬೇಕೆಂಬ ಸದುದ್ದೇಶದಿಂದ ಬ್ರಿಟಿಷ್ ಯೋಜನೆ ಯೆಷ್ಟೇ ದೋಷಪೂರ್ಣವಿದ್ದರೂ, ನಮಗದರಲ್ಲಿ ಎಂತಹ ಅಸಮ್ಮತಿ ಯಿದ್ದರೂ ನಾವೊಮ್ಮೆ ಒಪ್ಪಿಗೆ ಕೊಟ್ಟಿದ್ದೆವು. ಆದರೆ ಈ ಸಂಗತಿಯನ್ನು ಮರೆತೇಬಿಟ್ಟು ಬೊಂಬಾಯಿಯ ಕಾಂಗ್ರೆಸ್ ಸಮಿತಿ ಮಾಡಿರುವ ದ್ವಿಯಾರ್ಥದ ನಿರ್ಧಾರವನ್ನೂ, ಅಲ್ಲಿ ಕಾಂಗ್ರೆಸ್ ಪ್ರಮುಖರಾಡಿರುವ ವಿಶ್ವಾಸದ್ರೋಹೀ ಹೇಯ ಮಾತುಗಳನ್ನೂ ನೀವು ಕೇಳಿದಿರಷ್ಟೆ? ಇಂತಹ ಹುಚ್ಚಾಟಕ್ಕೇನು ಚಿಕಿತ್ಸೆ ಹೇಳಿ?

ಪದ್ಯ:-ಗುಂಪಿನೊಳಗಸ್ವಾಮು ಸೇರದೆ | ಸಂಪು ಹೂಡುವ ಯುಕ್ತಿ ಯಿದು, ಆ | ಕೆಂಪು ದಳಕುದ್ರೇಕವಿದು ಮೈ | ಕಂಪಿಸುವುದು || ೩ ||

ಜಿನ್ನಾ— ಧೀರ ಮುಸ್ಲಿಂ ರಾಷ್ಟ್ರೀಯರೇ. ಕಾಂಗ್ರೆಸಿಗರೀಗ ಹೂಡಿ ರುವ ಕುಯುಕ್ತಿಯನ್ನು ನೆನಸುವಾಗ ಜಿಗುಪ್ಸೆಯಿಂದ ವೈರೋಮಾಂ

ಚನಗೊಳ್ಳುತ್ತಿದೆ. ಬ್ರಿಟಿಷ್ ಘೋಷಣೆಯಲ್ಲಿ, ಪ್ರಾಂತಿಕ ಸಂಗಡಗಳಲ್ಲಿ ಸೇರುವ ಅಥವಾ ಸೇರದಿರುವ ಸ್ವಾತಂತ್ರ್ಯವು ಪ್ರತಿಯೊಂದು ಪ್ರಾಂತ್ಯಕ್ಕೂ ಇದೆ ಎಂದೇ ಆ ಆತ್ಮವಂಚಕ ಕಾಂಗ್ರೆಸಿಗರು ಅಪಾರ್ಥ ಕಟ್ಟಿರುವುದರ ಕಾರಣವೇನು ಗೊತ್ತೇ? ಅಸ್ಸಾಮು'ಸಿ' ಗುಂಪಿನಲ್ಲಿ ಸೇರದಂತೆಯೂ ಕೆಂಪಂಗೀ ದಳದ ವರ್ಚಸ್ಸಿರುವ ಗಡಿನಾಡು ಪ್ರಾಂತ್ಯವು 'ಬಿ'ಗುಂಪಿನಲ್ಲಿ ಪ್ರವೇಶಿಸದಂತೆಯೂ ಮಾಡುವ ದುರದ್ದೇಶವೇ ಅದರ ಒಳಾಂತರ್ಯ ಸಹಿಸಬಹುದೇ ಇಂತಹ ಒಳಸಂಚನ್ನು?

ಪದ್ಯ:-ಒಂದೆ ಒಂದಕ್ಷರವ ನುಡಿಯದೆ| ಚಂದ ನೋಡುತಲಿಹರು ಬ್ರಿಟಿಷರು । ಇಂದೆ ಕಲಿಸುವ ಬುದ್ಧಿಯವರಿಗೆ | ಚಂದದಿಂದ || ೪ ||

ಜಿನ್ನ— ಕಾಂಗ್ರೆಸಿಗರು ಇಂತಹ ಅಸಂಬಂಧ ಅಪಾರ್ಥಗಳನ್ನು ತಮ್ಮ ಹೇಳಿಕೆಗೆ ಕಟ್ಟುತ್ತಿರುವಾಗ ಅದನ್ನು ತಿದ್ದುವ ಜವಾಬ್ದಾರಿಯು ಬ್ರಿಟಿಷ್ ಸರಕಾರದ್ದಲ್ಲವೆ? ಆದರೆ ಅವರೀ ಕುರಿತು ಒಂದೇ ಒಂದು ಮಾತನ್ನಾಡಿದ್ದುಂಟೇನು? ಹಿಂದೀಯರು ತಮ್ಮೊಳಗೆ ತಲೆ ಬಡೆದುಕೊಳ್ಳುವ ಚಂದ ನೋಡಬೇಕೆಂದಿದ್ದಾರೆ ಆ ಬಿಳಿ ಜನರು. ಕಾಂಗ್ರೆಸಿಗರಲ್ಲೂ ಅದಕ್ಕನುಗುಣವಾದ ದುರ್ಭಾವವೇ ವ್ಯಾಪಿಸಿದೆ. ಪಾಶವಿಕ ಬಹುಮತದ ಬಲದಿಂದ ವಂಚಿಸಲು ಹೊರಟಿರುವ ಹಿಂದೂ ಕಾಂಗ್ರೆಸಿಗೂ ಅಧಿಕಾರಮದ ತಲೆಗೇರಿ, ಆತ್ಮವಂಚನೆ ನಡಿಸುತ್ತಿರುವ ಬ್ರಿಟಿಷ್ ಸರಕಾರಕ್ಕೂ ಏಕಕಾಲದಲ್ಲಿ ಬುದ್ಧಿ ಕಲಿಸುವುದು ನಮ್ಮ ಕರ್ತವ್ಯವಲ್ಲವೆ? ನಾವೀ ಕರ್ತವ್ಯಬಾಹಿರರಾಗಲು ಸಾಧ್ಯವೆ? ನಮ್ಮ ಅಸ್ತಿತ್ವಕ್ಕೇನೇ ಅಪಾಯವೊಡ್ಡುವ ಆಲಸ್ಯವನ್ನು ನಾವಿಂದು ತೋರಿಸಬಲ್ಲೆವೆ?

ಪದ್ಯ—ಒದೆದು ಝಾಡಿಸಿ ಯೋಜನೆಯ ಸಭೆ| ಯಿದಿರಿನಲೆ ಬಿರುದುಗಳ ಬಿಸುಡಿರಿ| ಕದನ ಕೊಡಿ ಪ್ರತ್ಯಕ್ಷ ಹೋರಾ| ಟವಲಿ ಗೆಲುವ||೫||

ಜಿನ್ನಾ— ಪಾಕಿಸ್ತಾನ್ ಝಿಂದಾಬಾದ್! ಬ್ರಿಟಿಷ್ ಸರಕಾರದ ಮೇ ತಾ. 16ರ ಘೋಷಣೆಯನ್ನು ಇಲ್ಲಿ-ಈಗ-ಈಗಲೇ ಒದ್ದು ಝಾಡಿಸಿ ಬಿಡೋಣ. ನಿಮ್ಮ ಸರ್, ಖಾನ್‌ಬಹದ್ದೂರ್, ಖಾನ್‌ಸಾಹೇಬ್ ಇತ್ಯಾದಿ ಎಲ್ಲಾ ಬಿರುದುಗಳನ್ನೂ - ಆ ಬ್ರಿಟಿಷ್ ಹಸ್ತಕಲಂಕಿತ ಎಲ್ಲಾ ಬಿಲ್ಲೆ

ಗಳನ್ನೂ–ಇಲ್ಲಿಯೇ ಈಗಲೇ ಕಿತ್ತೆಸೆಯಿರಿ ಮುಂದೆ ನಮ್ಮದು ಪ್ರತ್ಯಕ್ಷ ಹೋರಾಟ. ಕಾದಾಡಿ ಪಡೆಯುವ ಪಾಕಿಸ್ತಾನ್! ಖಾಡಾಖಾಡಿ ಹೋರಾಡಿ ಪಡೆಯುವ ಪಾಕಿಸ್ತಾನ್! ಪಾಕಿಸ್ತಾನ್ ಝಿಂದಾಬಾದ್!

ಪದ್ಯ:-(ಧಾಟಿ.-ಅಣ್ಣ ಸುಯೋಧನ ಲಾಲಿಸು ನಿನ್ನಯ।)

ಕೆರಳಿತು ಸಭೆಯುಬ್ಬೇರಿತು ಬಿಸುಟಿತು। ಬಿರುದನು ತೆಗೆತೆಗೆದು ॥
ಧುರ ಹುಂಕಾರದ ಮಾರ್ದನಿ ಮೊಳಗಿತು। ಮೊರೆದರು ನೆಗೆನೆಗೆದು॥೧॥

ಸಭಿಕರು—ಕಾಯಿದೇ ಅಝಾಮ್ ಝಿಂದಾಬಾದ್! ಪಾಕಿಸ್ತಾನ್ ಝಿಂದಾಬಾದ್! ಕಾಯಿದೇ ಅಝಾಮರೇ. ತಮ್ಮಾಜ್ಞೆಯಂತೆ ಆ ಕಪಟೀ ಬ್ರಿಟಿಷ್ ಸರಕಾರದ ಬಿರುದುಗಳನ್ನೆಲ್ಲಾ ತೆಗೆದೊಗೆದಿದ್ದೇವೆ. ಮುಂದಿನ ಪ್ರತ್ಯಕ್ಷ ಹೋರಾಟ ಯಂತ್ರಕ್ಕೆ ನಮ್ಮದೇಹದ ಪ್ರತಿಯೊಂದು ಕಣರಕ್ತ ವನ್ನೂ ತೈಲವಾಗಿ ಸುರಿದು ಅದು ಪಾಕಿಸ್ತಾನ್ ಗುರಿಮುಟ್ಟುವ ವರೆಗೂ ಮುನ್ನಡೆಸಲು ನಾವು ಸಿದ್ಧರೆಂದು ಪ್ರತಿಜ್ಞೆ ತೊಡುತ್ತೇವೆ ಪಾಕಿಸ್ತಾನವೇ ನಮ್ಮ ಪ್ರಾಣ! ಕಾಯಿದೇ ಅಝಾಮರ ಕಾರ್ಯ ಸಾಧನೆಗೇನೇ ನಮ್ಮ ರಕ್ತದ ಪ್ರತಿಯೊಂದು ಕಣ!

ಪದ್ಯ—ಛೆಂಗಿಸ್‌ಖಾನನ ಪುನರವತಾರವ।ಹಿಂಗದೆ ತೋರುವೆನು॥
ಸಂಗಡ ರಶ್ಯದ ಕರೆಯುವೆನೆನ್ನುತ। ಹಂಗಿಸಿದನು ನೂನು ॥ ೨ ॥

ಖಾನ್‌ನೂನ್—ಅಂದಿನ ಆ ಝೆಂಗಿಸ್‌ಖಾನರ ರುದ್ರ ನಾಟಕ ವನ್ನೇ ಪುನಃ ಆಡಿ ಹಿಂದುಗಳ ಸೊಕ್ಕಡಗಿಸದೆ ಬಿಟ್ಟೇವೆ? ಬ್ರಿಟಿಷರು ಪಾಕಿಸ್ತಾನ ಕೊಡದೆ ಹೋದಲ್ಲಿ ರಶ್ಯವನ್ನು ಸಹಾಯಕ್ಕೆ ಕರೆದು ಇಂಗ್ಲಾಂಡಿನ ವಂಚಕರಿಗೆ ಪಾಠ ಕಲಿಸದೆ ಬಿಡುವವರು ನಾವಲ್ಲ. ಸಾಗಲಿ ಪ್ರತ್ಯಕ್ಷ ಹೋರಾಟ! ನಡೆಯಲಿ ಜೀವನ್ಮರಣ ಸಮರ!

ಪದ್ಯ—ಸಿಡಿಯಲಿ ಗುಂಡುಗಳೊಡೆಯಲಿ ತಲೆ, ಮನೆ। ಸುಡಲದು ನಿಸ್ಸಾರ ॥ ಪಡೆವೆವು ಪಾಕಿಸ್ತಾನವನೆನ್ನುತ। ನುಡಿದನು ನಿಸ್ತಾರ ॥ ೩ ॥

ಅಬ್ದುಲ್‌ರಾಬ್ ನಿಸ್ತಾರ್—ಪಾಕಿಸ್ತಾನ್ ಝಿಂದಾಬಾದ್! ಈ ಪ್ರತ್ಯಕ್ಷ ಹೋರಾಟದಲ್ಲಿ ಏನೇ ಬಂದರೂ ಅನುಭವಿಸಿಯೇಸಿದ್ಧ! ನಮ್ಮೀ ದೃಢ ಶಪಥದಿದಿರಲ್ಲಿ, ಹೆಣಗಳ ಮೇಲೆ ಹೆಣಬಿದ್ದರೂ ರಕ್ತಪ್ರಳಯವೇ ಎದ್ದರೂ ದೇಶವು ಆದ್ಯಂತವಾಗಿ ಸುಡುಗಾಡಾಗಿ ಬಿದ್ದರೂ ಪಾಕಿಸ್ತಾನ

ವನ್ನು ಪಡೆವೇ ಸಿದ್ಧ! ಅದು ವಿನಹಾ ನಾವೆಂದಿಗೂ ಶಾಂತರಾಗುವಂತಿಲ್ಲ; ಎಂದಿಗೂ ವಿಶ್ರಮಿಸುವಂತಿಲ್ಲ.

ಪದ್ಯ:—ಉಸಿರನು ಕಟ್ಟಿಸಿ, ಸಂಕಟ ಹುಟ್ಟಿಸಿ | ಬಿಸಿ ಬಿಂಕವ ತೋರಿ || ಕಸಗೊಂಬೆವು ಪಾಲನ್ನೆಂದೆಲ್ಲರು | ಮಸೆದರು ಖತಿಯೇರಿ ||೪||

ಒಬ್ಬ- ಅಲ್ಲಹೋ ಅಕ್ಬರ್! ನಮ್ಮ ಪ್ರತ್ಯಕ್ಷ ಹೋರಾಟದಿಂದ ಹಿಂದೀಯರ ಶಾಂತಿಯುಸಿರನ್ನೇ ಬಂಧಿಸಿ, ಅವರು ಒದ್ದಾಡಿ ಸೋತು ಪಾಕಿಸ್ತಾನ ಕೊಡುವಂತೆ ಮಾಡುವುದೇ ಸರಿ!

ಮತ್ತೊಬ್ಬ—ಕಾಯಿದೇ ಅಝೂಮ್ ಝಿಂದಾಬಾದ್! ಮುಸ್ಲಿಂ ರಾಷ್ಟ್ರದ ಜನ್ಮದಾತ ಕಾಯಿದೇ ಅಝೂಮರ ಆಜ್ಞೆ ಮಾತ್ರವಲ್ಲ; ಅಂತರಂಗವೇನಿದೆಯೋ ಅದನ್ನು ನೆರವೇರಿಸಿ ಕೊಡಲು ನಮ್ಮ ಪ್ರಾಣವನ್ನಿದೋ, ಫಣವಾಗಿ ಒಡ್ಡಿದ್ದೇವೆ. ಸಾಧನೆ ಅಥವಾ ಸಾವೇ ಸರಿ!

ಮಗದೊಬ್ಬ—ಪಾಕಿಸ್ತಾನ್ ಝಿಂದಾಬಾದ್! ಒಂದು ಕಾಲದಲ್ಲಿ ಇಡೀ ಹಿಂದುಸ್ಥಾನವನ್ನು ಆಳಿದ್ದ ಮುಸ್ಲಿಂ ಬಾದಶಹರ ಭಾಗ್ಯದ ಆ ಕಾಲವನ್ನೇ ಪುನುರುತ್ಥಾನಗೊಳಿಸುವೆವು. ಕ್ರಮಪ್ರಕಾರ ಕೊಡದಿದ್ದಲ್ಲಿ ಕಸಗೊಳ್ಳದೆ ಬಿಡಲಾರೆವು; ಕೈಯೆತ್ತಿ ಕೊಡಲಾರರಾದರೆ ಕತ್ತಿಯಿಂದ ಪಡಕೊಳ್ಳುವುದೇ ಸರಿ.

ಪದ್ಯ:—ಡೈರೆಕ್ಟೇಕ್ಷನು ಹೂಡುವ ನಮ್ಮಯ|ವೈರವ ತೀರಿಸುವ || ಸೈರಣೆಯಿನ್ನೆಲ್ಲಿಂದೇ ಹೊಕ್ಕರು । ಬೈರವ ರಣಕಣವ || ೫ ||

ಜಿನ್ನಾ—ಶಹಬಾಸ್! ನನ್ನ ಧರ್ಮಬಂಧುಗಳೇ ಮೆಚ್ಚಿದೆ. ನಮ್ಮ ಸ್ವಾಭಿಮಾನ, ನಮ್ಮ ಅಸ್ತಿತ್ವ, ನಮ್ಮ ಧರ್ಮ, ಸಂಸ್ಕೃತಿ, ವೈಶಿಷ್ಟ್ಯ, ಭವಿಷ್ಯ ಇವೆಲ್ಲವೂ ನಿಮ್ಮ ಶಕ್ತಿ ಸಾಹಸಗಳನ್ನು ಹೊಂದಿಕೊಂಡಿವೆ ನಿಮ್ಮೀ ದೃಢ ನಿರ್ಧಾರದ ಮೇಲೆ ನಿಂತಿವೆ. ಹತ್ತು ಕೋಟಿ ಮುಸಲ್ಮಾನರ ಏಕೀಕೃತ ಶಕ್ತಿಯನ್ನಿದಿರಿಸಬಲ್ಲುದಾವುದೂ ಈ ಪ್ರಪಂಚದಲ್ಲಿಲ್ಲ. ನುಗ್ಗಿರಿ; ನಡೆಯಿರಿ ಮುಂದೆ. ಮಾತಿನ ಅಂಶ ಮುಗಿಯಿತು; ಹೂಡಿರಿ ಪ್ರತ್ಯಕ್ಷ ಹೋರಾಟ. ಈ ಲೀಗ್ ಕೌನ್ಸಿಲ್ ಎಂಬ ನಿಲ್ದಾಣದಿಂದೆದ್ದ ಶಕ್ತಿ ಸಾಹಸಗಳೇ ವಿಮಾನಗಳಂತೆ ಧಾವಿಸಿ ಹಾಹಾ ಎನ್ನುವದರೊಳಗೆ ಕಾರ್ಯ ಸಾಧಿಸುವಿರೆಂದು ನಂಬುತ್ತೇನೆ. ಸಭೆ ಮುಗಿಯಿತು—ಸಮರವಾರಂಭಿಸಿತು ಪಾಕಿಸ್ತಾನ್ ಝಿಂದಾಬಾದ್!

## ದೃಶ್ಯ ೫

### ಪದ್ಯ: (ಭಾಮಿನಿ ಷಟ್ಪದಿ)

ಹತ್ತಿಕೊಂಡಿತು ದಂಗೆಯುರಿಯುಪ | ಮೃತ್ಯು ಕುಣಿದಳು, ರಕ್ತ ದೋಕುಳಿ । ಯೆತ್ತಲೂ ಕೊಲೆಕೊಳ್ಳಿ ತಿವಿತದ ಪ್ರಳಯ ರಂಪಾಟ॥ ಇತ್ತ ನಡುಗಾಲಾಧಿಕಾರಕೆ। ಕುತ್ತ ತಾಗಿಸಿ ಘಟನೆ ಸಮಿತಿಯು | ಸತ್ತಿತೆಂದಿತು ಲೀಗು, ಆಟ್ಲೆಯ ಚಿಂತೆಗೊಳಗಾದ ॥ ೧ ॥

ಆಟ್ಲೆ—ಹಿಂದೀ ಸಮಸ್ಯೆಯೆಂಬುದು ಬಿಸಿಲ್ಗುದುರೆಯೇ ಸರಿ! ಅದನ್ನು ಹಿಡಿಯಹೋದಷ್ಟೂ ದೂರಕ್ಕೋಡುತ್ತಿದೆಯಲ್ಲ! ಮೇ 16ರ ಘೋಷಣೆಯನ್ನು ಧಿಕ್ಕರಿಸಿ ಮುಸ್ಲಿಂ ಲೀಗು ಮಹಾ ರಂಪಾಟವೆಬ್ಬಿಸಿದೆ. ಹಿಂದೀ ರಾಷ್ಟ್ರ ತುಂಬಾ ರಕ್ತದ ಪ್ರವಾಹಗಳೇ ಹರಿದಿವೆ- ನಡುಗಾಲ ಸರಕಾರದಲ್ಲಿರುವ ಕಾಂಗ್ರೆಸ್–ಲೀಗ್ ಪ್ರತಿನಿಧಿಗಳು ಪರಸ್ಪರ ಎಳೆದಾಡಿಕೊಂಡು, ಸಮಸ್ಯೆಯು ವೈಸರಾಯೀ ವೇವೆಲರ ಕೈಕಾಲು ತಪ್ಪಿಸುವಲ್ಲಿಗೆ ಬಂದಿದೆ. ಜಿನ್ನಾ, ಲಿಯಾಖತ್, ನೆಹರು, ಬಲದೇವಸಿಂಗರನ್ನು ಲಂಡನಿಗೆ ಕರೆಸಿಕೊಂಡು ಮೇ 16ರ ನಮ್ಮ ಘೋಷಣೆಯ ಸ್ಪಷ್ಟೀಕರಣವನ್ನು ನಾವೇ ಮಾಡಿದೆವಾದರೂ ಜಗಳ ನಿಲ್ಲಲಿಲ್ಲ. ಲೀಗು ಘಟನಾ ಸಮಿತಿಯನ್ನು ಬಹಿಷ್ಕರಿಸಿದೆ ಮಿಕ್ಕೆಲ್ಲಾ ಪಕ್ಷಗಳೂ ಸೇರಿ ಘಟನಾ ಸಮಿತಿ ಕಾರ್ಯವನ್ನು ಭರದಿಂದ ಮುಂದೊತ್ತುತ್ತಿವೆ. ಆದರೂ ದ್ವಿತೀಯ ಪ್ರಾಮುಖ್ಯ ಪಕ್ಷವಾದ ಮುಸ್ಲಿಂ ಲೀಗನ್ನು ಬಿಟ್ಟೇ ರಾಜ್ಯಾಂಗ ರಚಿಸಿದರೆ ಅದು ಸಿಂಧುವಾಗುವಂತಿದೆಯೆ?

ಪದ್ಯ:-(ಧಾಟಿ–ಕೋಮಲಾಂಗಿ ಕೇಳೇ।ಮದಗಜ|ಗಾಮಿನಿ ಪಾಂಚಾಲೇ)

ಭಾರತದುರಿ ಕಂಡು | ಆಟ್ಲೆಯ । ಪಾರ ವ್ಯಸನಗೊಂಡು ||ಊರಿದ ಮೊದಲಿನ ಹೆಜ್ಜೆಯು ಕೆಸರಲಿ॥ ಜಾರಿತೆನುತ ನವದಾರಿಯ ತೋರಿದ॥೧॥

ಆಟ್ಲೆ—ಸರಿ. ಭಾರತದ ಸಮಸ್ಯೆಯನ್ನು ಕಡೆ ಹಾಯುವ ಉದ್ದೇಶದಿಂದಿಟ್ಟ ಪ್ರಥಮ ಹೆಜ್ಜೆಯೇ, ಅಲ್ಲಿಯ ಇಂದಿನ ಕೆಸರು ವಾತಾವರಣದಲ್ಲಿ ಜಾರಿಹೋಯಿತು. ಬ್ರಿಟಿಷ್ ರಾಜಕಾರಣದ ಮುತ್ಸದ್ದಿತನವನ್ನೇ ಹಂಗಿಸುವಂತಿದೆಯಲ್ಲಾ ಹಿಂದೀ ಬಿಕ್ಕಟ್ಟಿನ ಬಿಗಿತ! ಆದರೆ ನಾವು ಯಾವ ಸಂದರ್ಭದಲ್ಲೂ, ಎಂತಹ ನಿರಾಶಾಜನಕ ಪರಿಸ್ಥಿತಿಯಲ್ಲಿಯೂ

ಪರಾಭವವನ್ನರಿಯದ ಜನಾಂಗವೆಂಬುದನ್ನು ಲೋಕಕ್ಕೀಗ ಪ್ರದರ್ಶಿಸ ಬೇಕಾಗಿದೆ. ಆದ್ದರಿಂದ ಮಂತ್ರಿಮಂಡಲದ ಅನುಮತಿ ಪಡೆದು ಹೊಸ ಹೆಜ್ಜೆಯನ್ನೇ ಇಡುತ್ತೇನೆ ನವ ನಿರೂಪಣೆಯನ್ನು ಸಾರಿಬಿಡುತ್ತೇನೆ.

ಪದ್ಯ:-ಕೇಳಿರಿ ಮಂತ್ರಿಗಳೇ|ಹಿಂದೀ|ಕೋಲಾಹಲ ರಗಳೆ||ಹೇಳಿಕೆ ಫಲಿಸದೆ ಹಿಂದೂ ದೇಶದಿ | ಕಾಳಗ ನಡೆದಿದೆ ಕಾರ್ಯವು ನಿಂತಿದೆ ||೨||

ಆಟ್ಲಿ—ಹಿಸ್ ಮೆಜೆಸ್ಟೀಸ್ ಮಂತ್ರಿ ಮಹಾನುಭಾವರೇ! ಮೇ 16ರ ನಮ್ಮ ಹೇಳಿಕೆಯ ಉದ್ದೇಶವೇನಿತ್ತೋ ಅದೀಗ ಫಲಿಸಿಲ್ಲ ಹಿಂದುಸ್ಥಾನದವರು ಪರಸ್ಪರ ಕಾದಾಡಿಕೊಳ್ಳುತಿದ್ದಾರೆ; ಅಮಾನುಷ ರೀತಿಯಲ್ಲಿ ರಕ್ತಪಾತ ನಡೆದಿದೆ ಕಾರ್ಯಸ್ತಬ್ಧವಾಗಿದೆ ಮೇ 16ರ ಘೋಷಣೆಗೆ ಇಷ್ಟರಲ್ಲೇ ಅಮಂಗಳಾರತಿಯಾಗಿದೆ!

ಪದ್ಯ:—ಘಟನಾ ಸಭೆಯೊಳಗೂ । ಸೇರದೆ । ಹಠದಿಂದಿದೆ ಲೀಗು || ನಟಿಸದೆ ಹೊರಡುವ ವಾಯಿದೆ ಹೇಳುವ || ಪಠಿಸುವ ಹೊಸ ಧೋರಣೆ ಯೊಂದೀಕ್ಷಣ || ೩ ||

ಆಟ್ಲಿ—ಇನ್ನು ತಡಮಾಡಿ ಫಲವಿಲ್ಲ. ಅಲ್ಲಿ ಒಪ್ಪಂದವಾಗಲಿ, ಆಗದಿರಲಿ, ನಾವಂತೂ ಮಾತು ಕೊಟ್ಟಂತೆ ಅಲ್ಲಿಂದ ಕಾಲ್ದೆಗೆಯಲೇ ಬೇಕು. ಅದಕ್ಕೊಂದು ನಿಶ್ಚಿತ ದಿನವನ್ನು ಈಗಲೇ ಸಾರಿಬಿಡೋಣ. ಹಿಂದೀಯರು ತಮ್ಮ ಪಾಲಿನ ಕರ್ತವ್ಯವನ್ನು ತಾವು ಮಾಡಲಾರದೆ ಹೋದರೂ ಬ್ರಿಟಿಷರು ಕರ್ತವ್ಯಬಾಹಿರರಾಗಲಾರರೆಂಬುದನ್ನು ತೋರಿಸೋಣ.

ಪದ್ಯ:—ಕಂಟಕವೇನಿರಲಿ|ನಲ್ವತ್ತೆಂಟನೆ ಜೂನಿನಲಿ ॥ ತಂಟೆಯ ಗಣಿಸದೆ ಹೊರಟೇ ಬಿಡುವೆವು ॥ ಮೌಂಟುಬೇಟನರನು ಕಳುಹಿಸಿ ಕೊಡುವೆವು || ೪ ||

ಆಟ್ಲೆ-ಹಿಂದೀಯರು ಆಲಿಸಲಿ! ಅಖಿಲ ಜಗತ್ತು ಸಾಕ್ಷಿಯಾಗಿರಲಿ. 1948ನೇ ಜೂನಿನೊಳಗೆ ಹಿಂದೀಯರ ಮೇಲೆ ಅಧಿಕಾರ ಹೊತ್ತು ಹಾಕಿ ನಾವಂತೂ ಹೊರಡುವುದು ಖಂಡಿತವೆಂದು ಈ ದಿನ-1947ನೇ ಜನವರಿ ತಾ 26ರಲ್ಲಿ-ಕಂಠೋಕ್ತವಾಗಿ ಹೇಳುತ್ತೇವೆ. ಈ ಮೊದಲೇ ಹಿಂದೀಯ ಪಕ್ಷಗಳು ಒಮ್ಮತಕ್ಕೆ ಬಂದಲ್ಲಿ ಆದರಂತೆ ವರ್ತಿಸಲು ನಾವು

ಬದ್ಧರು. ಬಾರದೆ ಹೋದರೆ ನಾವು ನಮಗೆ ಸರಿತೋರುವ ರೀತಿಯಲ್ಲಿ ಅಧಿಕಾರ ವರ್ಗಾಯಿಸಲಿದ್ದೇವೆ ಈಗಿನ ವೈಸರಾಯೀ ಲೋರ್ಡ್ ವೇವೆಲರ ಬದಲಿಗೆ, ಲೋರ್ಡ್ ಮೌಂಟ್‌ಬೇಟನರನ್ನು ವೈಸರಾಯಿಯಾಗಿ ನೇಮಿಸಿದ್ದೇವೆ. ಭಾವೀ ರಚನೆಯ ಕ್ಷೇತ್ರ ನಿರ್ಮಾಪಕರಾಗಿ, ನೋಡಿ, ಲೋರ್ಡ್ ಮೌಂಟ್‌ಬೇಟನರು ಹೊರಟಿದ್ದಾರೆ.

(ಮೌಂಟ್‌ಬೇಟನ್ ಒಡ್ಡೋಲಗ—)

ಹಾಡುಗಾರ—ತೇಜಃಪುಂಜರಿಗೆ ಸುಸ್ವಾಗತ.

ಮೌಂಟ್‌ಬೇಟನ್—ಬಹಳ ಸಂತೋಷ.

ಹಾಡುಗಾರ—ತಮ್ಮ ಪರಿಚಯ ಬೇಕಾಯಿತಲ್ಲಾ.

ಮೌಂಟ್‌ಬೇಟನ್—ಭಾರತದಲ್ಲಿ ಬ್ರಿಟಿಷ್ ಸರಕಾರದ ಅಗ್ರಗಣ್ಯ ಅಧಿಕಾರ ಪೀಠದ ನವಾರೋಹಿಯನ್ನು ಬಲ್ಲಿರಷ್ಟೆ?

ಹಾಡುಗಾರ-ಹಿಸ್ ಎಕ್ಸೆಲ್ಲೆನ್ಸಿ ಲೋರ್ಡ್ ಲುಯಿಸ್ ಮೌಂಟ್‌ಬೇಟನ್ ಓಫ್ ಬರ್ಮಾ.

ಮೌಂಟ್‌ಬೇಟನ್—ಸರಿ

ಹಾಡುಗಾರ—ವಿಜಯಗೈದ ಕಾರಣ?

ಮೌಂಟ್‌ಬೇಟನ್—ಇದೆ. ವೈಸರಾಯೀ ಗದ್ದುಗೆಯೇರಿಕೊಳ್ಳುತ್ತೇನೆ.

(ಪದ್ಯ:-ವಾರ್ಧಿಕ್ಯ ಷಟ್ಪದಿ)

ಅರಸು ಮನೆತನದೊಲವ ಯೋಧ ವೃತ್ತಿಯ ಛಲವ । ಅರಮನೆ ವಿಲಾಸವನ್ನು ರಣಕಣದ ರೋಷವನು ¦ ಅರಿತು ಅನುಭವಿಸಿ ಜೀರ್ಣಿಸಿಕೊಂಡ ಬೇಟನನು, ಬೆರಗಾದ ಭಾರತದಲಿ ||

ಮೌಂಟ್‌ಬೇಟನ್—ಬ್ರಿಟನಿನ ರಾಜಮನೆತನದಲ್ಲಿ ಜನಿಸಿ, ಸಾಮಾನ್ಯ ನೌಕಾನೌಕರಿಯಿಂದಾರಂಭಿಸಿ, 'ಬರ್ಮಾ ವಿಜೇತ'ನೆಂದು ಇಡೀ ಪ್ರಪಂಚದ ಜೈಕಾರ ದೊರಕಿಸಿಕೊಟ್ಟ ಕಳದ ಮಹಾಯುದ್ಧದ ಆಗ್ನೇಯ ಏಸ್ಯಾದ ಸರ್ವ ಸೇನಾನೀ ಹುದ್ದೆಯವರೆಗೂ ಏರಿದವನು ನಾನು. ರಾಜಮರ್ಜಿ—ಯೋಧಮನೋವೃತ್ತಿ—ಎರಡನ್ನೂ ಬಲ್ಲೆ ಅರಸು ಮನೆತನದ ನನ್ನ ರಕ್ತಕಣವು ರಣಕಣದಲ್ಲಿ ಚೆಲ್ಲಲು ತಯಾರಿತ್ತು.

ಅರಮನೆಯ ವಿಲಾಸ, ರಣರಂಗದ ಅಟ್ಟಹಾಸ, ಇವೆರಡು ವಿರುದ್ಧ ತುದಿಗಳೂ ನನ್ನೀ ಜೀವನ ಕೋನದಲ್ಲಿ ಒಂದುಗೂಡಿದ್ದುವು ಸಂಭ್ರಮದ ಶಿಖರ ಮತ್ತು ಸಾಹಸದ ಬುಡ ಇವೆರಡನ್ನೂ ಹತ್ತಿ ಇಳಿದ, ಅಪಜಯ ವನ್ನೇ ಅರಿಯದ ಜೀವವಿದು. ಆದರೆ ಏನಿದು! ಸಾರ್ವಭೌಮ ಸರಕಾರ ದಿಂದ ಭಾರತದ ವೈಸರಾಯಿ ಮತ್ತು ಗವರ್ನರ್ ಜನರಲನಾಗಿ ನೇಮಕ ಗೊಂಡು ಭಾರತಕ್ಕೆ ಬಂದು, ಇಲ್ಲಿಯ ರಾಜಕೀಯ ಸಮಸ್ಯೆಗಳನ್ನು ಬಿಡಿಸಲಾವ ವಿಧದಿಂದ ಪ್ರಯತ್ನಿಸಿದರೂ ವಿಪರೀತಗಳೇ ಮುಂದೆ ಬರುತ್ತಿವೆ ಹೊರತು ವಿಜಯ ಕೈಗೂಡಲಿಲ್ಲ!

ಪದ್ಯ:—ಕೆರಳಿದ ಸಮುದ್ರವಿದು ನಾವೆ ಸೇರದು ದಡಕೆ। ಹರಿಯದ ಸಮಸ್ಯೆಯಿದು ಮನಸು ಬಾರದು ದೃಢಕೆ। ಬರೆಯಲೇ ನಲ್ವತು ಕೋಟಿ ಜನತೆಯ ಹಣೆಯ। ಬರಹವನು, ಮಾಡಲೇನು? ॥ ೧ ॥

ಮೌಂಟ್‌ಬೇಟನ್--ಏನೆನ್ನಲಿ! ಭಾರತದ ರಾಜಕೀಯವೆಂಬುದು ತುಫಾನೆದ್ದ ಸಮುದ್ರವೇ ಆಗಿದೆ; ಅಲ್ಲಿ ರೌದ್ರ ಗಾಳಿ. ರಕ್ತದ ಅಲೆಗಳೆದ್ದಿವೆ; ಈ ಪ್ರಕ್ಷುಬ್ಧ ಶರಧಿಯಲ್ಲಿ ಬ್ರಿಟಿಷ್ ಸರಕಾರದ ಅಧಿಕಾರದಾನವೆಂಬ ನಾವೆಯನ್ನು ಹೇಗೆ ದಡ ಮುಟ್ಟಿಸಲಿ? ನಲ್ವತ್ತುಕೋಟಿ ಮಾನವ ಜನಾಂಗವುಳ್ಳ ಈ ಉಪಭೂಖಂಡದ ಭವಿಷ್ಯವನ್ನು ಯಾವ ಅಕ್ಷರದಿಂದ ಹೇಗೆ ಕೆತ್ತಲಿ? ಮನಸ್ಸೊಂದು ನಿರ್ಧಾರಕ್ಕೆ ಬರಲಾಗದ ಹಲವು ಸಮಸ್ಯೆಗಳು ತಲೆಯೆತ್ತಿವೆ. ಮನುಷ್ಯ ಶಕ್ತಿಯ ಪರಿಮಿತಿಯೊಳಗಿನದೆಲ್ಲವೂ ಮೌಂಟ್‌ಬೇಟನ್ ವ್ಯಕ್ತಿಗೆ ಸಾಧ್ಯವೆಂಬುದನ್ನು ಜಗತ್ತಿಗೇನೇ ಪ್ರದರ್ಶಿಸ ಬೇಕಾದ ಅತ್ಯಂತ ಕಠಿಣ ಜೊಣೆಗಾರಿಕೆ ಬಿದ್ದಿದೆ; ನನ್ನ ಶಕ್ತಿ ಪರೀಕ್ಷೆಯಾಗುತ್ತಿದೆ.

ಪದ್ಯ:-(ಧಾಟಿ:-ಕರಸಿ ಸಂಜಯನ ಕುಳ್ಳಿರಿಸಿ ಧರ್ಮಜ ಕೇಳ್ದ । ಗುರು ಭೀಷ್ಮ ಮುಂತಾಗಿರ್ದ॥)

ಆಗ್ನೇಯ ಏಶ್ಯಾ ಸೇನಾನಿತ್ವವನು ಮಿಕ್ಕ। ಅಗ್ನಿ ಪರೀಕ್ಷೆಯಿದು॥ ಭಗ್ನಮನೋರಥವಾಗಿ ಹಿಂದಿರುಗುರು। ದ್ವಿಗ್ನರಾಗಿರುವರಿಂದು ॥ ೧ ॥

ಮೌಂಟ್‌ಬೇಟನ್- ಏನಿದು, ಎಂತಹ ಕಡುತರ ಸಮಸ್ಯೆಯಿದು! ಮಹಾಯುದ್ಧದ ಕೊನೆಯಂಕದ ಅದೃಷ್ಟ ನಿರ್ಮಾಪಕ ಅವಧಿಯಲ್ಲೇ

ಆಗ್ನೇಯ ಏಶ್ಯಾದ ಸರ್ವ ಸೇನಾನಿಯಾಗಿ ವಿಜಯ ಸಂಪಾದಿಸಿ 'ಮೌಂಟ್ ಬೇಟನ್ ಓಫ್ ಬರ್ಮಾ' ಎಂಬ ಬಿರುದನ್ನು ಸಂಪಾದಿಸಿ ಕೊಳ್ಳುವುದಾದರೂ ಈ ಮೌಂಟ್‌ಬೇಟನನ ಶಕ್ತಿಗೊಂದು ಆಟ ದಂತಿತ್ತು. ಆದರೆ ಹಿಂದುಸ್ತಾನದ ವೈಸರಾಯೀ ಹುದ್ದೆಯೆಂಬುದು ಅದಕ್ಕೂ ಮಿಕ್ಕಿದ ಅಗ್ನಿಪರೀಕ್ಷೆಯಾಗಿ ನನ್ನನ್ನು ಕಂಗೆಡಿಸಿದೆ ಹಿಂದೀ ಯರಲ್ಲಿ ನಿರಾಶೆ, ಭಯ ಸಂದೇಹ, ಉದ್ರೇಕ ಮನೋವೃತ್ತಿ ಹಬ್ಬಿ ಇಡೀ ವಾತಾವರಣವು ಕಾದ ಕಾವಲಿಯಂತಾಗಿದೆಯಲ್ಲಾ!

ಪದ್ಯ—ಢಿಲ್ಲಿಯೊಳಿಳಿದಂದಿನಿಂದ ವಿಶ್ರಾಂತಿಯ। ನೆಳ್ಳಷ್ಟು ಪಡೆಯ ಲಿಲ್ಲ॥ ಗುಲ್ಲುಗೊಂದಲದಂಗೆ ಕೊಳ್ಳಿ ಕೊಲೆಗಳನ್ನು। ನಿಲ್ಲಿಸಲಾಗಿಲ್ಲ ॥೨॥

ಮೌಂಟ್‌ಬೇಟನ್— ಢಿಲ್ಲಿಯಲ್ಲಿ ಬಂದಿಳಿದಂದಿನಿಂದ ಅಂಜದೆ, ಅಳುಕದೆ, ಒಂದೇ ಒಂದು ದಿನ ವಿಶ್ರಾಂತಿ ಪಡೆಯದೆ ಹಿಂದೀ ಸಮಸ್ಯೆ ಯನ್ನು ಬಗೆಹರಿಸಬೇಕೆಂದು ಶತಪ್ರಯತ್ನಮಾಡಿ ನೋಡಿದೆ ಗಾಂಧೀ ಜಿನ್ನರ ಜತೆ ವಿನಂತಿಯನ್ನು ಹೊರಡಿಸಿದೆ ಆದರೇನು, ದೇಶತುಂಬಾ ಹಬ್ಬಿರುವ ರಕ್ತಪ್ರವಾಹಕ್ಕೊಂದು ಅಣೆಕಟ್ಟುಹಾಕಲಾಗಲಿಲ್ಲ, ಗೊಂದಲ ದಾವಾಗ್ನಿಯನ್ನು ನಂದಿಸಲಾಗಲಿಲ್ಲ ಅಯ್ಯ, ಹಿಂದೀ ವಾತಾವರಣವೇ!

ಪದ್ಯ—ಕಂಡೆ ಧುರೀಣರ ಯೋಚನೆ ಪಡೆದೆನ। ಖಂಡ ರಾಷ್ಟ್ರವ ನಿದನು॥ ತುಂಡರಿಪುದೆ ಗತಿಯೆಂದು ಮತ್ತೊಮ್ಮೆ ನಾ। ಲಂಡನಿಗ್ಹಾರಿ ದೆನು ॥ ೪ ॥

ಮೌಂಟ್‌ಬೇಟನ್—ಇಲ್ಲಿಯ ಕಾಂಗ್ರೆಸ್, ಲೀಗ್ ಮತ್ತು ಸಿಖ್ಖ ಪಕ್ಷಪ್ರಮುಖರನ್ನೂ ಇತರ ಹಿಂದೀ ಮುಖಂಡರನ್ನೂ ಕರೆಯಿಸಿ ಕೊಂಡು ಅಭಿಪ್ರಾಯ ಸಂಗ್ರಹಿಸಿ ನೋಡಿದಾಗ, ಈ ಅಖಂಡ ರಾಷ್ಟ್ರ ವನ್ನು ತುಂಡರಿಸುವ ವಿನಹ ಇಂದಿನ ಸಮಸ್ಯೆಯೆಂದಿಗೂ ಶೀರ್ಮಾನ ವಾಗುವಂತಿಲ್ಲವೆಂಬುದು ಖಚಿತವಾಯಿತು. ಅನಿವಾರ್ಯವಾದುದನ್ನು ಅತಿ ಬೇಗನೇ ಮಾಡುವದು ವಾಸಿಯೆಂದು ದೇಶ ವಿಭಜನಾ ಸೂತ್ರ ಗಳನ್ನು ತಯಾರಿಸಿ ಅವುಗಳನ್ನು ಹಿಡಿದುಕೊಂಡು ಕೂಡಲೇ ಮತ್ತೊಮ್ಮೆ ಲಂಡನಿಗೆ ಹಾರಿದೆ ನೋಡಿ.

ಪದ್ಯ—ಸಾರಿ ಸಂತೈಸಿ ಒಪ್ಪಿಸಿ ಬ್ರಿಟನಿನ ಸರ | ಕಾರಕೆ ಖತಿ ದೂಷಣೆ ‖ ಸೇರದಂದದಿ ಗೈದೆಸೀಗ ಸಾರುವೆ ಜೂನು | ಮೂರರ ನವಘೋಷಣೆ ‖ ೩ ‖

ಮೌಂಟ್‌ಬೇಟನ್—ಶಹಭಾಸ್! ಎಲ್ಲವನ್ನೂ ಸುಗಮಗೊಳಿಸಿ ಕೊಂಡೆ. ಒಂದು ದಡಸಿಕ್ಕಿತು. ನನ್ನ ಯೋಜನೆಯ ಪೂರ್ವಾಪರಗಳನ್ನೆಲ್ಲಾ ಅಟ್ಲೀ ಮಂತ್ರಿಮಂಡಲಕ್ಕೆ ಮಂದಟ್ಟು ಮಾಡಿ, ಅವರ ಒಪ್ಪಿಗೆ ಪಡೆದುದಲ್ಲದೆ, ಬ್ರಿಟಿಷ್ ಸರಕಾರಕ್ಕೆ ಯಾವ ವಿಧದ ದೋಷಾರೋಪಣೆಗಳೂ ತಟ್ಟದಂತೆ ಚರ್ಚಿಲ್ಲರನ್ನೂ ಒಲಿಸಿ ಎಲ್ಲರ ಮನಮೆಚ್ಚಿಸಿ ಒಂದು ಹೊಸ ನಿರ್ಧಾರದೊಂದಿಗೀಗ ಧಿಲ್ಲಿಗೆ ಮರಳಿದ್ದೇನೆ. ಈ ದಿನ—1947ನೇ ಜೂನ್ 3ರಲ್ಲಿ—ಬ್ರಿಟಿಷ್ ಸರಕಾರದ ಈ ನವಯೋಜನೆಯನ್ನು ಘೋಷಿಸಿ ಬಿಡುತ್ತೇನೆ

ಪದ್ಯ:—(ಭಾಮಿನಿ ಷಟ್ಪದಿ)

ಹಿಂದಿ ಜನತೆಯು ಕೇಳಿರಿದಕೋ | ಇಂದು ಘಟನಾ ಸಮಿತಿ ಸೇರದೆ | ಹಿಂದೆ ನಿಂತಿಹ ಭಾಗಗಳು ರಚಿಸುವುದು ಹೊಸ ಸಮಿತಿ ‖

ಮೌಂಟ್‌ಬೇಟನ್—ಹಿಂದೀ ಪ್ರಕ್ಷಪ್ರಮುಖರೇ; ಜನ ಸಾಮಾನ್ಯರೇ; ಎಲ್ಲರೂ ಆಲಿಸಬೇಕು. 1946ನೇ ಮೇ 16ರ ಮಂತ್ರಿ ಸಮಿತೀಯೋಜನೆಯೇ ಅತ್ಯುತ್ತಮವೆಂದೂ. ರಕ್ಷಣೆ, ಒಳವ್ಯವಸ್ಥೆ, ವ್ಯಾಪಾರ, ಮತ್ತಿತರ ಸರ್ವಾವಶ್ಯಕತೆಗಳ ಮೇಲಿಂದಲೂ ಹಿಂದುಸ್ಥಾನವು ಅಖಂಡವಾಗಿದ್ದು, ಏಕ ಕೇಂದ್ರಾಧಿಕಾರಕ್ಕೊಳಪಟ್ಟಿರುವದೇ ಯೋಗ್ಯವೆಂದೂ ಈಗಲೂ ನಮ್ಮ ದೃಢಾಭಿಪ್ರಾಯ. ಆದರೆ ದುರ್ದೈವವಶಾತ್ ಅದಕ್ಕನುಸಾರವಾಗಿ ಕಾರ್ಯವೀಗ ನಡೆದಿಲ್ಲವಾದ್ದರಿಂದ ನಾವೀಬಾರಿ ನಮ್ಮ ಕೊನೆಯ ಸ್ಪಷ್ಟ ಯೋಜನೆಯನ್ನು ಮುಂದಿಡುತ್ತೇವೆ. ಪ್ರಚಲಿತ ಘಟನಾ ಸಮಿತಿಯಲ್ಲಿ ಭಾಗವಹಿಸಿದ ಬಹುಸಂಖ್ಯಾಕರುಳ್ಳ ಭಾಗಗಳು, ಪ್ರತ್ಯೇಕವಾಗುವಂತೆ, ತಾವೇ ಒಂದು ಹೊಸ ಘಟನಾ ಸಮಿತಿಯನ್ನು ರಚಿಸಿಕೊಳ್ಳಬಹುದು.

ಪದ್ಯ:—ಇಂದಿನಾ ಪಂಜಾಬು ವಂಗದ | ಹಿಂದು ಮುಸ್ಲಿಮು ಭಾಗ ವಿಭಜಿಸಿ, | ಸಿಂಧ ಸೇರಿಸಿ, ಗಡಿಯ ಪ್ರಾಂತ್ಯದಿ ಮತಗಣನೆ ಮಾಡಿ ‖ ೧ ‖

ಮೌಂಟ್‌ಬೇಟನ್—ಯಾವ ಜಾತೀಯತಾ ತತ್ವವನ್ನಾಧರಿಸಿ ಈ ಪ್ರತ್ಯೇಕತೆ ಯಾಚಿಸಲ್ಪಟ್ಟಿರುವುದೋ ಅದೇ ತತ್ವಕ್ಕನುಸಾರವಾಗಿ ಪಂಜಾಬಿನ ಮುಸ್ಲಿಂ ಮತ್ತು ಸಿಖ್ ಹಿಂದೂ ಬಹುಮತವುಳ್ಳ ಭಾಗಗಳನ್ನೂ, ಬಂಗಾಳದ ಹಿಂದೂ ಮತ್ತು ಮುಸ್ಲಿಂ ಬಹುಮತದ ಎರಡು ಭಾಗಗಳನ್ನೂ ಪ್ರತ್ಯೇಕಿಸಬೇಕಾಗಿದೆ ಕೊನೆಯ ಗಡಿ ನಿರ್ಧಾರಕ್ಕೆ ಕಮಿಶನುಗಳ ನೇಮುಕವಾಗುವದು. ಸದ್ಯದ ನಿರ್ಧಾರವನ್ನು ಆಯಾಯ ಭಾಗಗಳ ಎಸೆಂಬ್ಲಿ ಸದಸ್ಯರು ಮಾಡಿದರಾಯಿತು ಇಂದಿನ ವಿಶೇಷ ವಿದ್ಯಮಾನವನ್ನು ಲಕ್ಷ್ಯಿಸಿ ಗಡಿನಾಡು ಪ್ರಾಂತ್ಯವು ಈಗಿನ ಘಟನಾ ಸಮಿತಿಗೆ ಸೇರಬೇಕೋ ಅಥವಾ ಹೊಸ ಸಮಿತಿಗೋ ಎಂಬುದನ್ನು ಅಲ್ಲಿಯ ಜನಮತ ಸಂಗ್ರಹಿಸಿ ನಿರ್ಧರಿಸಬೇಕು ಅಸ್ಸಾಮ್ ಪ್ರಾಂತ್ಯದಲ್ಲಿ ಮುಸ್ಲಿಂ ಬಹುಮತವುಳ್ಳ ಸಿಲ್ಹೆಟ್ ಜಿಲ್ಲೆಯಲ್ಲೂ ಮತಗಣನೆಯಾಗಲಿ ಈ ನೀತಿ ಬಲೂಚಿಸ್ಥಾನಕ್ಕೂ ಅನ್ವಯಿಸುತ್ತದೆ. ಸಿಂಧ ಪ್ರಾಂತ್ಯದ ಎಸೆಂಬ್ಲಿಯೇ ತಾನಾವಕಡೆ ಸೇರಬೇಕೆಂಬುದನ್ನು ನಿರ್ಧರಿಸಿದರಾಯಿತು.

ಪದ್ಯ: - (ದಾಟಿ ಕೋಮಲಾಂಗಿ ಕೇಳೆ | ಮದಗಜ |
ಗಾಮಿನಿ ಪಾಂಚಾಲೆ ।)

ಬರುವ ಅಗೋಸ್ತಿನಲೀ । ಹದಿನೈ । ದರ ತಾರೀಕಿನಲೀ ‖ ಎರಡು ವಿಭಾಗಕೆ ಪೂರ್ಣ ಸ್ವರಾಜ್ಯವ । ಕರೆದೀಯುವೆವಿದೊ ನಡೆಯಲಿ ಸಿದ್ಧತೆ ‖ ೧ ‖

ಮೌಂಟ್‌ಬೇಟನ್— ಇನ್ನು ತಡವಿಲ್ಲ; ಪ್ರತಿ ಮಾತಿಲ್ಲ. ಈಗ ಸಾರಿದ ಯೋಜನೆಯೇ ನಮ್ಮ ಅಚಲ ನಿರ್ಧಾರ. ಇದೇ 1947 ನೇ ಅಗೋಸ್ತು 15 ನೇ ತಾರೀಕಿಗೆ ರಾಷ್ಟ್ರದ ಎರಡು ಭಾಗಗಳಿಗೂ ಪೂರ್ಣ ಸ್ವಾಧಿಕಾರವನ್ನು ಕೊಟ್ಟುಬಿಡುತ್ತೇವೆ ಅದಕ್ಕನುಸಾರವಾಗಿ ಪೂರ್ವ ತಯಾರಿಯ ಸರ್ವಕಾರ್ಯಗಳೂ ಸಾಗಲಿ; ಗಡಿನಾಡಿನಲ್ಲಿ ಮತಗಣನೆಯಾಗಲಿ; ಪಂಜಾಬು ಬಂಗಾಳಗಳ ಎಸೆಂಬ್ಲಿ ಸದಸ್ಯರು ಎರಡೆರಡು ಪಂಗಡಗಳಾಗಿ ತಂತಮ್ಮ ಭಾಗವು ಯಾವ ಕೇಂದ್ರಕ್ಕೆ ಸೇರಬೇಕೆಂಬುದನ್ನು ನಿರ್ಧರಿಸಲಿ ಸಿಲ್ಹೆಟ್ ಜಿಲ್ಲೆಯಲ್ಲೂ ಜನಮತ ಸಂಗ್ರಹಿಸಲಿ;

ಬಲೂಚಿಸ್ಥಾನದ ಜಿರ್ಗಾವು ತನ್ನ ಪಾಲಿನ ನಿರ್ಧಾರ ಮಾಡಲಿ; ಸಿಂಧ್ ಪ್ರಾಂತಿಕ ಎಸೆಂಬ್ಲಿಯಲ್ಲಿ ಠರಾವಾಗಲಿ. ವಿಭಜನಾ ಪಾಲುಪಟ್ಟಿ ತಯಾರಾಗಿ ಕೇಂದ್ರದಲ್ಲೂ, ಬಂಗಾಳ ಪಂಜಾಬುಗಳಲ್ಲೂ ಸಮಿತಿಗಳ ನೇಮಕವಾಗಲಿ; ಗಡಿ ಸಮಿತಿಗಳು ಕಾರ್ಯಪ್ರವೃತ್ತವಾಗಲಿ. ಭಾರತದ ಭವಿಷ್ಯವು ಭರದಿಂದ ರೂಪಿಸಲ್ಪಡಲಿ. ಕೆಲಸವು ಅತ್ಯಂತ ಪ್ರಾಮುಖ್ಯದ್ದಿರುವಂತೆಯೇ ಅತ್ಯವಸರದ್ದಿರುವುದರಿಂದ ಪ್ರತಿಯೊಬ್ಬರೂ ಪ್ರತಿಯೊಂದು ಕ್ಷಣವನ್ನೂ ತಮ್ಮ ಶಕ್ತಿಯ ಪ್ರತಿಯೊಂದು ಅಣುವನ್ನೂ ಈ ಮಹತ್ಕಾರ್ಯದಲ್ಲಿ ವಿನಿಯೋಗಿಸಲಿ.

ಪದ್ಯ:-ಇದು ಮಮಹೃದ್ಭೇದಿ। ಆದರು। ಇದೆ ನಮ್ಮಯ ಹಾದಿ ॥ ಬೆದರದೆ ಬೆಚ್ಚದೆ ಸ್ವೀಕರಿಸುವ ಕಾ। ದಿದೆ ನವಯುಗವೆಂದೊರೆದ ಜವಾಹಿರ ॥ ೨ ॥

ನೆಹರು—ಸರಿ. ಬ್ರಿಟಿಷ್ ಸರಕಾರದ ಹೊಸ ನಿರೂಪಣೆ ಹೊಸ ವೈಸರಾಯಿಯಿಂದಾಗಿದೆ. ಇದಕ್ಕೊಪ್ಪಿಗೆ ಕೊಡುವ. ಈ ಯೋಜನೆಯನ್ನು ನನ್ನ ದೇಶಬಂಧುಗಳಿಗೆ ಶಿಫಾರಸು ಮಾಡುವಾಗ ನನ್ನ ಹೃದಯವೇನೋ ಬಿರಿಯುತ್ತಿದೆ. ಆದರೂ ನಿಸ್ಸಂಕೋಚವಾಗಿ ಸ್ಪಷ್ಟವಾಣಿಯಿಂದ ಹೇಳುತ್ತೇನೆ: ಬಂಧುಗಳೇ, ಸದ್ಯಸ್ಥಿತಿಯಲ್ಲಿ ಇದಕ್ಕಿಂತ ಉತ್ತಮವಾದ ಬೇರೊಂದು ವಿಧಾನವಿಲ್ಲ. ಪೂರ್ಣ ಸ್ವಾತಂತ್ರ್ಯದ—ಸರ್ವರ ಸುಖಸಮಾನತೆಯ-ಗುರಿಗೆ ನಮ್ಮನ್ನು ಕೊಂಡೊಯ್ಯುವ ಹಾದಿಯೆಂದರೆ ಇದೇ. ರಾಷ್ಟ್ರವಿಭಜನೆಯ ಸೂಚನೆಯಿದೆಯೆಂಬುದರಿಂದ ಯಾರೂ ಎದೆ ಕಳಕೊಳ್ಳದಿರಲಿ. ನಮ್ಮ ದೇಶಕ್ಕೆ ಭವ್ಯ ಭವಿಷ್ಯ ಕಾದಿದೆ. ಆ ಗುರಿಯನ್ನು ತೋರಿಸುವ ತೋರ್ಗಂಭವಿದು, ಈ ಯೋಜನೆ! ವನ್ಯ ಜಂತುಗಳಂತೆ ಪರಸ್ಪರ ಕಚ್ಚಾಡಿಕೊಂಡು ಲೋಕದಿದಿರು ಅವಹೇಳನಕ್ಕೆ ಗುರಿಯಾಗಿರುವ ನಾವು, ಸರ್ವಮಾನ್ಯ ಮಹಾ ಜನಾಂಗವಾಗಿ ತಲೆಯೆತ್ತಲಾಗುವ ಹೊಸ ಯುಗ ಮುಂದಿದೆ. ಸಿದ್ಧರಾಗಿರಿ ಜೈ ಹಿಂದ್!

ಪದ್ಯ:-ಕೊಳಕುಗಳಿಹವು ಥಿಟ। ಆದರು। ಫಲಿಸಿಹುದೆಮ್ಮ ಹಠ ॥ ಗೆಲವನು ಪಡೆದಿದೆ ನಮ್ಮಯ ತಕ್ಸವು। ತಿಳಿಸುವೆ ಕೊನೆಯಲ್ಲೆಂದನು ಜಿನ್ನನು ॥ ೩ ॥

ಜಿನ್ನಾ - ಶಹಭಾಸ್! ಕನಸಾಗಿದ್ದುದನ್ನು ಪ್ರತ್ಯಕ್ಷ ಕಾಣುವಂತಾಯಿತು. ಈ ಯೋಜನೆಯಲ್ಲಿ ದೋಷಗಳೇನೋ ಬಹಳವಿವೆ. ಆದರೂ ನಮ್ಮ ಪಾಕಿಸ್ತಾನ್ ತತ್ವವನ್ನಿದರಲ್ಲಿ ಒಪ್ಪಿಕೊಳ್ಳಲಾಗಿದೆ. ಹತ್ತುಕೋಟಿ ಮುಸ್ಲಿಮರ ಸ್ವಾತಂತ್ರ್ಯ ಹೋರಾಟದ ಮೂಲ ತತ್ವವು ಮನ್ನಿಸಲ್ಪಟ್ಟಿದೆ ಈ ವಿಷಯವು ಅತ್ಯಂತ ಪ್ರಾಮುಖ್ಯದ್ದಿರುವುದರಿಂದಲೂ. ನಿರ್ಲಿಪ್ತ ಮನಸ್ಸಿನಿಂದ ಆಳವಾಗಿ ವಿಚಾರಿಸಿಕೊಳ್ಳತಕ್ಕ ಗೂಢಾಂಶಗಳು ಬಹಳವಿರುವುದರಿಂದಲೂ ಮುಸ್ಲಿಂಲೀಗಿನ ಸಭೆ ಕರೆದು, ಪರ್ಯಾಲೋಚಿಸಿ-ನಮ್ಮ ನಿರ್ಧಾರವನ್ನು ಕೊನೆಗೆ ತಿಳಿಸುತ್ತೇನೆ. ಪಾಕಿಸ್ತಾನ್ ಝಿಂದಾಬಾದ್.

ಪದ್ಯ:-ಸಿಖ್ಖರಿಗಿದು ಘಾತಿ | ಆದರು | ತಕ್ಕಂತಿದೆ ರೀತಿ ॥ ದುಃಖವ ಗಣಿಸದೆ ಧಾವಿಸಿದರೆ ಮುಂ | ದಕ್ಕಿದೆ ಐಕ್ಯತೆಯೆಂದನು ಸಿಂಗನು ॥ ೪ ||

ಬಲದೇವಸಿಂಗ್— ದೇಶವಿಭಜನೆಯನ್ನು ಸೂಚಿಸುವ ಈ ಯೋಜನೆಯು ಎಲ್ಲರಿಗೂ, ವಿಶೇಷತಃ ಸಿಖ್ಖರಿಗೆ ಹಾನಿಕರವೆಂಬುದು ನಿರ್ವಿವಾದ ಅಖಂಡ ರಾಷ್ಟ್ರದಂತೆಯೇ ಅವಿಭಕ್ತ ಸಿಖ್ಖ್, ಸಮಾಜಕ್ಕೂ ವಿಚ್ಛೇದನಾ ಕೊಡಲಿ ಮುಂದೆ ಬಂದಿದೆ ಆದರೂ ಸದ್ಯ ಸ್ಥಿತಿಯಲ್ಲಿ ಅನಿವಾರ್ಯವಾದ, ಕಾಲೋಚಿತವಾದ ರೀತಿಯಿದು, ಯಾರೂ ಎದೆಗುಂದಬೇಡಿರೆಂದು ಭವಿಷ್ಯದತ್ತ ಕೈತೋರಿಸಿ ಕೇಳುತ್ತೇನೆ! ಇದೊಂದೇ ಹಾದಿಯಿರುವಾಗ ಕಂಟಕವುಂಟೆಂದು ಇಲ್ಲಿಂದಲೂ ಕಾಲು ಹಿಂಪೆಳೆಯುವುದು ಸರಿಯಲ್ಲ. ನಾವೀ ಯೋಜನೆಯನ್ನಂಗೀಕರಿಸಿಕೊಂಡು ಕಾರ್ಯ ಸಾಗಿಸಿದರೆ ವಿಭಜನೆಯು ಕ್ಷಣಿಕವನ್ನಿಸಿ ಕ್ಷಿಪ್ರದಲ್ಲೇ ರಾಷ್ಟ್ರವು ಪುನಃ ಅಖಂಡವಾಗುವುದೆಂದೇ ನನ್ನ ದೃಢ ವಿಶ್ವಾಸ.

ಪದ್ಯ—ಸ್ವಾಗತಿಸಿತು ದೇಶ | ಸಿಂತಿತು | ಕೂಗು, ರಣಾವೇಶ ॥ ಸಾಗಿತು ಯೋಜನೆ, ಶೋಭ ವಿಮರ್ಶೆಗ|ಳಾಗಲೆ ನೆರೆದುದು ಲೀಗಿನ ಕೌನ್ಸಿಲು || ೫ ||

ಜಿನ್ನಾ— ಸರಿ. ಮೌಂಟ್‌ಬೇಟನ್ ಯೋಜನೆಗೆ ವ್ಯಕ್ತಿಶಃ ನನ್ನ ಅನುಮೋದನೆ ಸೂಚಿಸಿರುವೆನಾದರೂ ರಾಜಕಾರಣವೆಂಬುದು ಕತ್ತಿ ಧಾರೆಯೆಂಬುದನ್ನು ಮರೆಯಲಾಗುವುದಿಲ್ಲ ಆದ್ದರಿಂದ ಈ ನವ

ಯೋಜನೆಯು ಕುರಿತು ನಮ್ಮವರ ಹಾಗೂ ನಮ್ಮ ವಿರೋಧಿಗಳ ಪ್ರ
ಕ್ರಿಯೆಗಳೇನು ಎಂಬುದನ್ನು ಸೂಕ್ಷ್ಮವಾಗಿ, ತುಲನಾತ್ಮಕವಾಗಿ, ಪ
ಶೀಲಿಸುವಾಗ, ರಾಷ್ಟ್ರವು ಇದನ್ನು ಸ್ವಾಗತಿಸಿದೆ ಎಂಬುದು ಸ್ಪಷ್ಟವಿದೆ
'ಇದ್ದುದರಲ್ಲಿ ವಾಸಿ' ಎಂದೆಲ್ಲರೂ ಒಂದಲ್ಲೊಂದು ವಿಧದ ಸಮಾಧಾನ
ಪ್ರದರ್ಶಿಸಿದ್ದಾರೆ. ಲೀಗಿನ ಅತೃಪ್ತಿಯಿಂದೆದ್ದ ಚಳವಳದ ಉರಿಗೆ
ದರ್ಪಕರಗಿದ್ದರಿಂದಲೇ ವಿರುದ್ಧ ಪಕ್ಷೀಯರೂ ಈ ದೇಶ ವಿಭಜನಾ
ತತ್ವದ ಸ್ವೀಕಾರಕ್ಕೆ ಸಿದ್ಧರಾದರು ಹೊರತು ಮತ್ತೇನು? ವಿಭಜನಾ
ಬೇಡಿಕೆಯ ಸೊಲ್ಲು ಕೇಳದೊಡನೆಯೇ 'ಅಪ್ರಬುದ್ಧತೆ' 'ಅಸಂಬದ್ಧತೆ'
'ಅಪಹಾಸ್ಯಕರ' ಎಂದು ನನ್ನನ್ನು ಹಂಗಿಸುತ್ತಿದ್ದವರ ಕಣ್ಣೆದಿರಲ್ಲೇ ಈಗ
ಇದ್ದಕ್ಕಿದ್ದಂತೆ ಅದರ ಆಕಾರವೇ ಮೂಡಿದೆ. ಈ ಜಿನ್ನನ ಜನ್ಮ ಸಾಫಲ್ಯ
ವಿದು! ಇನ್ನು ತಡಮಾಡದೆ ಲೀಗ್ ಕೌನ್ಸಿಲಿನ ಗುಪ್ತಾಧಿವೇಶನವನ್ನು
ಢಿಲ್ಲಿಯಲ್ಲಿ ಕರೆದು ಅಂಗೀಕಾರ ನಿರ್ಧಾರ ಮಾಡಿಸಿ ಬಿಡುತ್ತೇನೆ.

## ದೃಶ್ಯ ೬

ಪದ್ಯ—(ವಾರ್ಧಿಕ್ಯ ಷಟ್ಪದಿ)

ಕಾಯಿದೆ ಅಝಾಮು ಪಾಕಿಸ್ತಾನ ಸ್ಥಾಪಕನ | ನಾಯಕತ್ವದಿ
ಲೀಗು ಕೌನ್ಸಿಲು ಮಹಾಸಬೆ ಠ | ರಾಯಿಸಿತು ಢಿಲ್ಲಿಯಲ್ಲಿ ಗುಟ್ಟನಲಿ
ಸೇರಿ, ಜಯಘೋಷವೆದ್ದಿತು ಜಿನ್ನನ ||

ಜಿನ್ನಾ— ಶಾಭಾಸ್! ಹತ್ತು ಕೋಟಿ ಮುಸಲ್ಮಾನರು ಜೀವನ್ಮ
ರಣದ ಪ್ರಶ್ನೆಯಾಗಿ ಮಾಡಿ ಹೋರಾಡಿದ ಅಜೇಯ ಪಾಕಿಸ್ತಾನ್ ತತ್ವ
ವಿಂದು ಅಸ್ತಿತ್ವಕ್ಕೇನೇ ಬಂತು. ಎಂತೆಂತಹ ಬಿರುಗಾಳಿಯೆದ್ದರೂ ಮುರಿದು
ಬೀಳದೆ ನನ್ನ ಲೀಗ್ ಧ್ವಜವು ವಿಜಯಾಕಾಶಕ್ಕೆ ಏರಿ ನಿಂತಿತು. ಭೇಷ್!
ಏಕ ನಾಯಕತ್ವ, ಏಕ ಧೋರಣೆ, ಏಕ ವಾಕ್ಯದ ಲೀಗಿನ ಸ್ಪಷ್ಟ ಪರಿಚ
ಯವು ಇಂದಾದರೂ ಲೋಕಕ್ಕಾಯಿತಲ್ಲ ಆಹಾ! ಢಿಲ್ಲಯ ಈ ಕೌನ್ಸಿಲ್
ಸಭೆಗಾಗಿ ನೆರೆದಿರುವ ನನ್ನ ಮುಸ್ಲಿಂ ರಾಷ್ಟ್ರಬಂಧುಗಳ ಆನಂದೋತ್ಸಾಹ
ವೆಂತಹದು! ಸ್ವತಂತ್ರ ಸಾರ್ವಭೌಮಾಧಿಕಾರೀ ಪಾಕಿಸ್ತಾನ್ ಪ್ರಜೆಗಳ
ಈ ವಿಜಯೋನ್ಮಾದವು ಈ ಸಂದರ್ಭದಲ್ಲಿ ಸಹಜವಾದುದೇ. ಏನಿದು!
'ಪಾಕಿಸ್ತಾನ್ ಶಾಹಿನ್ ಷಾ!' ಎಂದೇ ನನ್ನ ಜಯಘೋಷಗಳೇಳುತ್ತಿವೆ;

ಛೀಛೀ! ನಾನು ಪಾಕಿಸ್ತಾನ್ ಸಾಮ್ರಾಟನಾಗಬಲ್ಲೆನೆ? ಸಾಮ್ರಾಜ್ಯ ಲಾಲಸೆಯ ಅಪವಾದವು ನನಗೆ ನನ್ನ ವೈರಿಗಳಿಂದ ದೊರೆತುದೇ ಸಾಕು; ಆತ್ಮೀಯರಿಂದದು ಬಾರದಿರಲಿ. ಹತ್ತು ಕೋಟಿ ಭಿನ್ನ ಜನಾಂಗವೊಂದರ ರಕ್ಷಣೆಯನ್ನಷ್ಟೇ ನಾನೀ ಮೂಲಕ ಸಾಧಿಸಿದ್ದೇನೆ. ಮುಸ್ಲಿಂ ಬಂಧುಗಳು ಪಾಕಿಸ್ತಾನ್ ಪ್ರಜೆಗಳು-ಆಲಿಸಬೇಕು. ಇದು ಒಣಾಭಿಮಾನ ಪ್ರದರ್ಶನದ ಕಾಲವಲ್ಲ; ಹೊಣೆ ನಿರ್ವಹಿಸುವ ಸಂದರ್ಭ ನಮ್ಮ ಯೋಗ್ಯತೆಯು ಅಗ್ನಿ ಪರೀಕ್ಷೆಗೊಳಗಾಗಿರುವ ಕಾಲ. ಆದ್ದರಿಂದ ಎಲ್ಲರೂ ಶಾಂತರಾಗಿರಿ. ನಿರ್ವಿಕಾರ ಬುದ್ಧಿಯಿಂದ ನಮ್ಮ ಗುರಿಯ ಕಡೆಗೆ ಮುಂದೊತ್ತೋಣ. ಪಾಕಿಸ್ತಾನಕ್ಕೆ ಜಯವಾಗಲಿ. ಪಾಕಿಸ್ತಾನ್ ಸುದೃಢವಾಗಲಿ. ಪಾಕಿಸ್ತಾನ್ ಚಿರಾಯುವಾಗಲಿ

ಪದ್ಯ:-ಆಯಿತೇ ಹರಕು ಪಾಕಿಸ್ತಾನ, ಲೀಗಿಗ | ನ್ಯಾಯಗೈದರು ಪ್ರಾಂತ್ಯಗಳು ತುಂಡರಿಸಿದರು | ನೋಯದಿರಿ ಖಂಡಿತದ ಪಾಲಾಗಿ ಪ್ರತ್ಯೇಕ ಸ್ಥಾನ ದೊರೆಯಿತು ಗೆದ್ದೆವು ||೧||

ಜಿನ್ನಾ—ಸ್ವತಂತ್ರ ಮುಸ್ಲಿಂ ರಾಷ್ಟ್ರೀಯ ಸಹೋದರರೇ ಧರ್ಮ ಬಂಧುಗಳೇ. ಪಂಜಾಬು, ಬಂಗಾಳಗಳನ್ನು ವಿಂಗಡಿಸಿ, ನಮಗೀ ಯೋಜನೆಯಲ್ಲಿ ಮಹದನ್ಯಾಯ ಮಾಡಿದ್ದಾರೆ ಜೂನ್ 3ರ ಯೋಜನೆಯಿಂದ ಲೀಗಿಗೆ ಹರಕು ಪಾಕಿಸ್ತಾನವೇ ದೊರೆತಂತಾಗಿದೆ. ಆದರೆ ನೀವು ಹೇಗೆ ಹೆಗ್ಗಳಿಕೆ ಪ್ರದರ್ಶಿಸಬಾರದೋ ಹಾಗೆಯೇ ನಿರಾಶರಾಗುವುದೂ ಬೇಡ. ನಮ್ಮ ಸ್ವತಂತ್ರ ರಾಷ್ಟ್ರದ ಅಸ್ತಿವಾರ ಬಿದ್ದಿದೆ. ರಾಷ್ಟ್ರದಲ್ಲಿ ನಮಗೊಂದು ಖಂಡತುಂಡ ಪಾಲು ದೊರೆತಿದೆ. ಇಸ್ಲಾಂ ನವರಾಷ್ಟ್ರವೊಂದರ ಉದಯವಾಗಿದೆ. ಲೋಕದ ಚರಿತ್ರೆಯಲ್ಲೇ ಅನ್ಯಾದೃಶ್ಯವಾದ ಅಲ್ಪಾವಧಿಯೊಳಗೆ ನಾವೊಂದು ರಾಷ್ಟ್ರವನ್ನು ಗೆದ್ದುಕೊಂಡೆವು; ಒತ್ತಾಯದಿಂದ ಕೊರೆದು ತೆಗೆದೆವು! ಈ ವಿಜಯವೇನು ಸಣ್ಣದೇ? ಆದ್ದರಿಂದ ಮೌಂಟ್‌ಬೇಟನ್ ಯೋಜನೆಗೆ ಒಪ್ಪಿಗೆ ಕೊಡೋಣ. ಎಲ್ಲರೂ ಸಮ್ಮತಿಸುವಿರಿ ತಾನೆ? ಆ ಸಮ್ಮತಿಯೊಂದಿಗೆ ಬಂಗಾಳ ಪಂಜಾಬುಗಳನ್ನು ವಿಭಜಿಸಿದ ಅಂಶವನ್ನು ಕಠಿಣವಾಗಿ ಖಂಡಿಸಲು ನಾವು ಮರೆಯಬಾರದು

ಪದ್ಯ:-(ಧಾಟಿ-ಅಣ್ಣ ಸುಯೋಧನ ಲಾಲಿಸು ನಿನ್ನಯ | ಪುಣ್ಯ

ಫಲೋದಯವು

ಎಂದಧ್ಯಕ್ಷನು ನುಡಿದುದನಾಲಿಸಿ । ಮುಂದಿಯು ಹುರುಪೇರಿ ॥
ಒಂದೇ ಕಂಠದಿ ಸೈಯೆಂದರು, ವಿಜ | ಯಾಂಥತೆ ಮತ್ತೇರಿ ॥ ೧ ॥

ಜಿನ್ನಾ — ಭೇಷ್! ನನ್ನ ಧರ್ಮಬಂಧುಗಳೇ, ನನ್ನ ಸೂಚನೆಯು ಎಂದಿನಂತೆ ಸರ್ವಾನುಮತದಿಂದ ಮಂಜೂರಾಗಿದೆ ಮುಂದಿನ ಕಾರ್ಯ ನಿರ್ವಹಣದ ಸರ್ವ ಜವಾಬ್ದಾರಿಯನ್ನೂ ನನಗಿತ್ತಿದ್ದೀರಿ. ನೀವು-10 ಕೋಟಿ ಮುಸಲ್ಮಾನರು-ನನ್ನ ಹಿಂದಿರುವಾಗ ನನ್ನಾ ಕಾರ್ಯದಲ್ಲಿ ಕೊರತೆ, ನಷ್ಟ, ದಾಕ್ಷಿಣ್ಯವೆಲ್ಲಿಯೂ ತೋರಿಬರಲಾರದೆಂದು ಆಶ್ವಾಸನೆ ಕೊಡುತ್ತೇನೆ ಇದುವರೆಗೆ ಕಲ್ಪನೆಯಲ್ಲಿದ್ದು, ಈಗ ಕಣ್ಣ ಮುಂದೇನೇ ಬಂದಿರುವ ಆ ಸ್ವತಂತ್ರ ಸಾರ್ವಭೌಮಾಧಿಕಾರೀ ಪಾಕಿಸ್ತಾನದ ಭವ್ಯ ಚಿತ್ರವನ್ನು ಚಿತ್ರಿಸಿಕೊಂಡಿರಿ. ಪಾಕಿಸ್ತಾನಕ್ಕೆ ಜಯವಾಗಲಿ ಇನ್ನು ಕಾರ್ಯಪ್ರವೃತ್ತರಾಗೋಣ

(ಗಾಂಧೀ ಒಡ್ಡೋಲಗ)

ಹಾಡುಗಾರ—ಮಹಾತ್ಮಾಗಾಂಧೀಕೀ ಜೈ!

ಗಾಂಧಿ— ಇದು ನನ್ನ ಮಟ್ಟಿಗೆ ಜೈಕಾರದ ಸಂದರ್ಭವಲ್ಲ; ಹಾಹಾ ಕಾರದ ದುರಂತ!

ಪದ್ಯ:-ಇತ್ತಲು ಗಾಂಧಿಜಿ ಪಾವನ ಹೃದಯಕೆ | ಹತ್ತಿತು ಬಿಸಿ ಬೇಗೆ॥ಕತ್ತಿಯ ಚಾಚಿದರಕಟ ಅಖಂಡತೆ । ಸತ್ತಿತು, ಬಗೆ ಹೇಗೆ? ॥ ೨ ॥

ಗಾಂಧಿ – ಏನನರ್ಥವಿದು! ಎಂತಹ ಆಪತ್ತೊದಗಿ ಬಂತು. ಭಾರತ ಮಾತೆಯನ್ನೇ ಕತ್ತರಿಸಿ ಹಾಕುವ ಕತ್ತರೀ ಯೋಜನೆ ಮುಂದೆ ಬಂದಿದೆ. ನನ್ನಲ್ಲಿ ಜಾಗ್ರತಿ ಮೊಳೆತ ಕಳದ ಐವತ್ತು ವರುಷಗಳಿಂದಲೂ ನಾನು ಕನವರಿಸುತ್ತಾ ಬಂದಿದ್ದ ಆ ರಾಮರಾಜ್ಯ-ಸ್ವತಂತ್ರ ಅಖಂಡ ಭಾರತ-ಭೂಸ್ವರ್ಗ-ಬಿಸಿಲ್ಗುದುರೆಯಾಯಿತೆ! ನನ್ನ ಅಹಿಂಸಾಚಂದ್ರ ನನ್ನ ಕಣ್ಣೆದಿರಲ್ಲೇ ಅಸ್ತಂಗತನಾಗಿ ಕತ್ತಲೆಯಾವರಿಸಿದುದು ಮಾತ್ರವಲ್ಲ; ಆ ಗಾಢಾಂಧಕಾರದಲ್ಲಿ ಬಾರತ ಮಾತೆಯೆಡವಿ ಬಿದ್ದು ನಡುಮುರಿದು ಕೊಳ್ಳುವ ಅವಘಡವನ್ನೂ ಕಾಣಬೇಕಾದ ದುರ್ಭಾಗ್ಯ ನನಗೊದಗಿತು. ಮುಂದೇನು ಹಾದಿ?

ಪದ್ಯ:-ಆದರಖಂಡತೆಯುಳಿಸುವೆನೆಂದರೆ|ಹಾದಿಯು ಬೇರಿರದು ||
ಸಾಧಿಸಲಿದ ಕಾಂಗ್ರೆಸು ಎನುವಾಶೀ | ರ್ವಾದವು ನನ್ನದಿದು || ೩ ||

ಗಾಂಧಿಜೀ—ಆದರೇನು ಮಾಡಲಿ! ಸದ್ಯದ ಪರಿಸ್ಥಿತಿಯ ಪರಿಣಾಮವಿದು. ಇದು ಬ್ರಿಟಿಷರ ತಪ್ಪೆಂದು ಹೇಗೆ ಹೇಳಲಿ? ಕಾಂಗ್ರೆಸು ಇದಕ್ಕನುಕೂಲವಾಗದೆ, ಹೀಗೆಯೇ ಮಾಡತಕ್ಕದ್ದೆಂದು ನಾನಾವ ಭಿನ್ನ ಹಾದಿಯನ್ನು ತೋರಿಸಲಿ? ಇಲ್ಲ; ಅನ್ಯಥಾ ಉಪಾಯವೇ ಗೋಚರಿಸದು. ಇಂದಿನ ಕಲುಷಿತ ವಾತಾವರಣದಲ್ಲಿ ಬೇರೆ ಹಾದಿಯಿಲ್ಲವಾದ್ದರಿಂದಲೇ ಈ ಕವಲುಫಥವನ್ನು ಕಾಂಗ್ರೆಸು ಹಿಡಿಯಬೇಕಾಗಿದೆ. ನೋಟವನ್ನು ಶುದ್ಧವಾಗಿಟ್ಟುಕೊಂಡು ಮುಂದೊತ್ತಿದಲ್ಲಿ ಈ ಗಡಿ ದಾಟಿ ಶುದ್ಧ ನೆಲೆಗೆ—ಅಖಂಡ ರಾಷ್ಟ್ರೀಯತೆಗೆ—ಸೇರಲು ಸಾಧ್ಯವಿದೆ. ಆದ್ದರಿಂದ ಮೌಂಟ್ ಬೇಟನ್ ಯೋಜನೆಗೆ ಸಮ್ಮತಿ ಸೂಚಿಸಿದ ಕಾಂಗ್ರೆಸ್ ಕಾರ್ಯಕಾರೀ ಸಮಿತಿಯ ನಿರ್ಧಾರವನ್ನಂಗೀಕರಿಸುವಂತೆ ಅಖಿಲ ಭಾರತ ರಾಷ್ಟ್ರಸಭಾ ಸಮಿತಿಗೆ ಉಪದೇಶಿಸಲು ಅದರ ಸಭೆಗೆ ಹೋಗುತ್ತೇನೆ.

ಪದ್ಯ:-(ಧಾಟಿ:-ಬಂದನೂ | ಗೌರಿ | ಕಂದ ಕುಮಾರನೈತಂದನೂ)
ಸೇರಿತು | ಸಭೆ | ಸೇರಿತು || ಸೇರಿತು ಕಾಂಗ್ರೆಸು ಸಭೆಯು |
ಮುಂದೆ | ದಾರಿತೋರುವ ಶುಭ್ರಪ್ರಭೆಯು || ಬೀರುವ ದೀವಿಗೆ | ಯೇರಿ
ಸುವಂಥ ವಿ|ಚಾರ ಮಾಡುವೆವೆಂದು|ಭಾರಿ ವೈಭವದಿಂದ || ಸೇರಿತು||೧||

ಕೃಪಾಲನಿ – ಜೂನ್ 3ರ ಮೌಂಟ್‌ಬೇಟನ್ ಘೋಷಣೆಯು ನಿರೀಕ್ಷಿಸಿದ್ದ ಆಪತ್ತನ್ನೇ ನಿಜಗೊಳಿಸಿತು. ತಲತಲಾಂತರಗಳಿಂದ ಏಕ ರೂಪಿಯಾಗಿದ್ದ ಭಾರತಾಂಬೆಗೆ ಶಸ್ತ್ರಕ್ರಿಯೆ ನಡೆಸಿ, ಕೊಳೆತು ಅಸಹ್ಯ ವೇದನೆ ಕೊಡುತ್ತಿರುವ ಆಕೆಯ ಅಂಗಗಳನ್ನು ಕತ್ತರಿಸಿ ತೆಗೆಯುವ ಸಂಧಿಯೊದಗಿತು. ಆದರೆ ಈ ಶಸ್ತ್ರಕ್ರಿಯೆಯೇ ಆಕೆಯ ಜೀವ ರಕ್ಷಣೋಪಾಯ. ಅನಿವಾರ್ಯವಾದ ಈ ವಿಪತ್ತಿಗಾಗಿ ಯಾರೇಕೆ ದುಃಖಿಸಬೇಕು? ಮುಂದೆ ಈ ಕುರಿತು ದೃಢವಾಗಿ ಮುಂದೊತ್ತುವ ಧೋರಣೆ ನಿರ್ಧರಿಸಲು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಮಹಾಸಭೆಯನ್ನು ಢಿಲ್ಲಿಯಲ್ಲಿ ಕರೆದಂತಾಯಿತು. ಪ್ರಾಯಶಃ ಹಿಂದಿನ ಯಾವ ಕಾಂಗ್ರೆಸ್ ಅಧ್ಯಕ್ಷನ ಪಾಲಿಗೂ ಒದಗಿರದಂತಹ ಸಂತಾಪಕರ ಸಮಸ್ಯೆಯಲ್ಲೀಗ

ನಾನು ಸಿಕ್ಕಿಬಿದ್ದೆ. ಆದರೆ ಅನಿವಾರ್ಯ. ಆಗಲಿ ಈಗ ಪಂಡಿ
ನೆಹರು ತಮ್ಮ ಠರಾವನ್ನು ತರಲಿ.

ಪದ್ಯ:-ನೆಹರುವು ಸೂಚನೆ ತಂದು | ಪೇಳ್ದ | ಸಹಿಸುವ ಕಷ್ಟ
ನಿಂದು || ಸಹಜವು ನಮ್ಮೆದೆ | ದಹಿಸುತಿಹುದು ನಾವು ವಹಿಸಿದ್ದ ಗು
ಮಟ್ಟ | ವಹಹ ಕುಸಿದುವಿಂದು || ೨ ||

ನೆಹರು—ಬಂಧುಗಳೇ ಮೌಂಟ್‌ಬೇಟನ್ ಯೋಜನೆಯನ್ನು
ಅಂಗೀಕರಿಸಬೇಕೆಂಬ ಸೂಚನೆಯನ್ನು ನಾನು ಸಭೆಯ ಮುಂದಿಡುತ್ತೇನೆ
ನಮ್ಮೆಲ್ಲರ ಹೃದಯದಲ್ಲೂ ದೀರ್ಘ ಕಾಲದಿಂದ ಶಾಶ್ವತವಾಗಿ ಕೆತ್ತಲ್ಪ
ಟ್ಟಿದ್ದ ಅಖಂಡ ಭಾರತಾಂಬೆಯ ರೂಪವನ್ನು ಛೇದಿಸುವುದರೊಂದಿಗೆ
ನಮ್ಮ ಹೃದಯವನ್ನೂ ಈ ಯೋಜನೆಯು ಛೇದಿಸಿದೆ ಎಂಬುದು ಖಂಡಿತ
ನಮ್ಮೆದೆ ಸುಡುತ್ತಿದೆ ನಾವು ಗುರಿ ಮುಟ್ಟುವ ಹೊತ್ತಿನಲ್ಲೇ ಆ ಗುರಿ
ಕುಸಿದು ಬಿದ್ದು ವಿಕಾರಾಕಾರ ಹೊಂದಿದಂತಾಯಿತು! ನಮ್ಮ ಕಲ್ಪನೆಯ
ಆ ಅಖಂಡ ಸ್ವತಂತ್ರ ಭಾರತವು ನಮ್ಮ ಕೈಗೀಗ ದೊರೆತಿರುವ ಈ
ಯೋಜನೆಯಲ್ಲಿ ಎರಡು ತುಂಡುಗಳಾಗಿ ಚಿತ್ರಿಸಲ್ಪಟ್ಟಿದೆ! ಆದರೂ ಭಾವೀ
ಕಲ್ಯಾಣದ ಮೇಲೆ ಕಣ್ಣಿಟ್ಟು, ಐಕ್ಯವನ್ನು ಸಾಧಿಸಿಕೊಳ್ಳುವೆವೆಂಬ ದೃಢ
ವಿಶ್ವಾಸದಿಂದ ಈ ಸಂಕಷ್ಟಕ್ಕೆ ತಲೆಕೊಡೋಣ ನಮ್ಮನ್ನು ನಾವೇ
ಸಂತೈಸಿಕೊಳ್ಳುವ!

ಪದ್ಯ:-ತುಂಬಿಹಳಿದೆಯನಾರಾಧ್ಯ | ಭಾರ | ತಾಂಬೆಯ ಮರೆವು
ದಸಾಧ್ಯ || ಹಂಬಲೆಲ್ಲವು ನಿಂತು | ಕಾಂಬೆವೈಕ್ಯವ ಜಯ | ಸ್ತಂಭ
ವೇರುವದೆಂದು | ನಂಬಿ ಸ್ವೀಕರಿಸುವ || ೩ ||

ನೆಹರು - ದೇಶಬಂಧುಗಳೇ. ಬ್ರಿಟಿಷ್ ಸರಕಾರದ ಜೂನ್ 3ರ
ಘೋಷಣೆಯನ್ನು ನಾವೀಗ ಅಂಗೀಕರಿಸಬೇಕೆಂದು ಕೇಳಿಕೊಳ್ಳುತ್ತೇನೆ.
ಶತಮಾನಗಳಿಂದ ಅಖಂಡ ಸ್ವರೂಪಿಣಿಯಾಗಿದ್ದ ಭಾರತಾಂಬೆಗೆ ಕತ್ತರಿ
ಪ್ರಾಯವಾದ ಈ ಯೋಜನೆಯನ್ನು ನಾವು ಸ್ವೀಕರಿಸಿಕೊಳ್ಳುವದೆಂದರೆ
ನಿಜಕ್ಕೂ ಅದೊಂದು ಅದ್ಭುತವೇ ಸರಿ ಆದರೆ ನೆನಪಿರಲಿ; ತಲತಲಾಂತ
ರಗಳಿಂದ ನಮ್ಮ ಹೃದಯ ಮತ್ತು ಮೆದುಳಲ್ಲಿ ಚಿರಸ್ಥಾಯಿಯಾಗಿರುವ
ಭಾರತಾಂಬೆಯು ಎಂದೆಂದಿಗೂ ಅಖಂಡ ಸ್ವರೂಪಿ; ಅಜೇಯ ಪ್ರತಾಪಿ.

ಆದರೆ, ಈಗೇನು? ಭಾರತಾಂಬೆಯ ಅಚ್ಚಳಿಯದ ಅಖಂಡತ್ವಕ್ಕೆ ಚ್ಯುತಿಯಿಲ್ಲವೆಂಬ ದೃಢ ವಿಶ್ವಾಸದಿಂದ, ಕ್ಷಿಪ್ರದಲ್ಲೇ ಎಲ್ಲಾ ಭ್ರಮೆಯೂ ತೊಲಗಿ ಒಂದಾಗುವೆವೆಂಬ ಪೂರ್ಣ ಭರವಸೆಯಿಂದ, ಸದ್ಯಕ್ಕೊಮ್ಮೆ ಈ ತಾತ್ಕಾಲಿಕ ಶಮನವನ್ನು ಮಾಡಿಕೊಳ್ಳೋಣ. ಜೂನ್ ಮೂರರ ಘೋಷಣೆಯನ್ನು ಸ್ವೀಕರಿಸೋಣ.

ಪದ್ಯ:-ಜಯಜಯ ಗಾಂಧಿ ಮಹಾತ್ಮ। ದಾಸ್ಯ | ಭಯ ದೂರ ದೇಶಾಂತರಾತ್ಮ॥ ದಯಮಾಡಿ ಸಭೆಗನು।ನಯದಿಂದ ನುಡಿವ ವಿ|ಷಯ ದೊಡ್ಡದಿದು ಸಹ್ಯ । ದಯರಾಗಿ ಯೋಚಿಸಿ ॥ ೪ ॥

ಹಾಡುಗಾರ – ಮಹಾತ್ಮಾಗಾಂಧಿಕೀ ಜೈ!

ಗಾಂಧಿಜೀ – ಬಂಧುಗಳೇ ದೇಶವಿಭಜನೆಯ ಕುರಿತು ನನ್ನ ಅಭಿಪ್ರಾಯವೇನೆಂಬುದನ್ನು ನೀವು ಬಲ್ಲಿರಿ. ಅದಕ್ಕೆ ನನ್ನ ವಿರೋಧವು ಇಂದಿಗೂ ಅಚಲವಿದೆ ಆದರೂ ಅದನ್ನಂಗೀಕರಿಸುವ ಕಾಲೋಚಿತ ಧೋರಣೆಯನ್ನು ನೀವು ವಹಿಸಬೇಕೆಂದು ನಿಮ್ಮನ್ನು ಕೇಳಿಕೊಳ್ಳಲು ಸಭೆಗೆ ಬಂದಿದ್ದೇನೆ ಸದ್ಯ ನಿಮ್ಮ ಮುಂದಿರುವ ಕಾರ್ಯ ಮತ್ತು ಕಾಲವೆರಡನ್ನೂ ತೂಗಿ ನೋಡಿ ನಿರ್ಧರಿಸಿರಿ. ನಿಮ್ಮ ವಿಶ್ವಾಸಪಾತ್ರರಾದ, ನಿಮ್ಮ ಸೇವೆಯೆಂಬ ಯಜ್ಞಕುಂಡದಲ್ಲಿ ತಮ್ಮ ಸರ್ವಸ್ವವನ್ನೂ ಆಹುತಿಯಾಗಿ ಅರ್ಪಿಸಿರುವ ನಿಮ್ಮ ಧುರೀಣರೇ ನಿಮ್ಮ ಪರವಾಗಿ ಒಪ್ಪಿಗೆ ಕೊಟ್ಟಿರುವ ವಿಷಯವಿದು. ಅವರ ಮೇಲೆ ಅಪನಂಬಿಕೆ ಪ್ರದರ್ಶಿಸಿ, ಲೋಕದಿದಿರು ಅವಹೇಳನಕ್ಕೆ ಗುರಿಯಾಗಬೇಡಿ; ನಿಮ್ಮ ಹಿತಸಾಧಕರಿಗೆ ನೀವು ಕೃತಘ್ನರಾಗಬೇಡಿ; ಎಂದೇ ನಿಮಗೆ ನನ್ನ ಸಲಹೆ.

ಪದ್ಯ:-ಸಾವಿಲ್ಲ ಸತ್ಯಕೆಂದೆಂದು | ಬಂಧು । ಭಾವದಿ ಮುಸ್ಲಿಮು ಹಿಂದು ॥ ನಾವೆಲ್ಲರೊಂದೆ ಸಂ। ಭಾವಿಸಿ ಕೊಳಿ ಹಿಂಸೆ । ಕಾವ ನಂದಿಸಿ ದೇಶ | ಸೇವಕರಾಗಿರಿ ॥ ೫ ॥

ಗಾಂಧಿಜೀ—ಸಹೋದರ ಸಹೋದರಿಯರೇ, ಸತ್ಯಕ್ಕೆ ಸಾವಿಲ್ಲ; ಅಹಿಂಸೆಗೆ ಅಳಿವಿಲ್ಲ ಹಿಂದು, ಮುಸ್ಲಿಂ, ಸಿಖ್, ಪಾರ್ಸಿ, ಮೊದಲಾದ ಇತರರೆಲ್ಲರೂ ಬಂಧುಗಳೆಂದು ಭಾವಿಸಿಕೊಳ್ಳುವ ಮೂಲಕವೇ ಈಗ ಬಂದಿರುವ ಕಳಂಕವನ್ನು ಶುದ್ಧೀಕರಿಸೋಣ; ಇಂದಿನ ಪರೀಕ್ಷೆಯಲ್ಲಿ ಉತ್ತೀರ್ಣ

ರಾಗೋಣ ಅಗ್ನಿಯನ್ನು ಅಗ್ನಿಯಿಂದಲೇ ನಂದಿಸಲಾರೆವು; ದ್ವೇಷವನ್ನು ದ್ವೇಷದಿಂದಲೇ ನಿವಾರಿಸುವುದಸಾಧ್ಯ ಆದ್ದರಿಂದ ಶಾಂತಿ ಸೌಹಾರ್ದ್ರತೆಯನ್ನೇ ಸುರಿಸೋಣ.

ಪದ್ಯ:- ಹಾಗಾದರುಂಟು ಕಲ್ಯಾಣ ನಮ್ಮ | ರೋಗಕ್ಕೆ ಅದೆ ರಾಮಬಾಣ || ರಾಘವಗೆದ್ದಂತೆ | ಆಗರದಿಂದ ಸ್ವ | ರ್ಗಾಗಮಿಸುವ ತೆರ | ವೀಗ ಜಯಿಸಿರೆಂದ || ೫ ||

ಗಾಂಧಿಜೀ—ಇಂದು ತಪ್ಪು ನಡೆದಿದೆ. ನಿಜ; ಈ ಪವಿತ್ರ ರಾಷ್ಟ್ರಕ್ಕನ್ಯಾಯವಾಗಿದೆ ಆದರೆ ಆ ದಿನ ಶ್ರೀರಾಮಚಂದ್ರನನ್ನು ಕಾಡಿಗೆ ಕಳುಹಿಸಿದುದು ತಪ್ಪಾಗಿರಲಿಲ್ಲವೆ? ಆ ತಪ್ಪು ನಡೆದುದರಿಂದಾಗಿಯೇ ರಾವಣನೆಂಬ ದುಷ್ಕೃತ್ಯಗಳ ಸಂಹಾರದ ಕಲ್ಯಾಣ ಕಾರ್ಯಕ್ಕವಕಾಶ ದೊರೆತುದಲ್ಲವೆ? ಕಲ್ಮಷಪೂರ್ಣ ಮಣ್ಣಿನಿಂದ ಭಂಗಾರವನ್ನಾಯ್ದುಕೊಳ್ಳುವಂತೆ ಇಂದಿನ ದೇಶವಿಭಜನಾ ಪ್ರಮಾದದಿಂದ ಭಾವೀ ಕಲ್ಯಾಣವನ್ನು ಶೋಧಿಸಿ ತೆಗೆಯೋಣ. ಈ ಸೂಚನೆಯನ್ನು ಮನ್ನಿಸಿರಿ; ಆ ಮೂಲಕ ನಿಮ್ಮ ನಾಯಕರಮೇಲೆ ವಿಶ್ವಾಸ ಪ್ರದರ್ಶಿಸಿರಿ ನಾನು ನಿಮಗೆ ಕೊಡುವ ಸಲಹೆಯಿಷ್ಟೆ.

ಪದ್ಯ:-(ಧಾಟಿ ಅಣ್ಣ ಸುಯೋಧನ ಲಾಲಿಸು)

ನೆಹರುವು ನುಡಿದನು ಮೂರನೆ ಬ್ರಿಟಿಷರು | ಸಹ ಇಲ್ಲಿರುವನಕ |
ಸಹಜತೆ ಶಾಂತತೆ ನೆಲಸದು, ನಿತ್ಯ ಕ | ಲಹ, ನಮಗಿಲ್ಲ ಸುಖ || ೧ ||

ನೆಹರು—ಬಂಧುಭಗಿನಿಯರೇ; ನಮ್ಮ ರಾಷ್ಟ್ರಜನಕನ ಹಿತವಚನಗಳನ್ನಾಲಿಸಿದಿರಿ ಪದ್ಯ ಕೆರಳಿದ ಸಮುದ್ರದಂತೆ, ಹಬ್ಬಿದ ದಾವಾಗ್ನಿಯಂತೆ ಪ್ರಕ್ಷುಬ್ಧವಾಗಿರುವ ವಾತಾವರಣದ ಕಡೆಗೆ ನಾವು ಅಗತ್ಯವಾಗಿ ಕಣ್ಣು ಬಿಡಬೇಕು. ನಮ್ಮ ಬಯಕೆ ಹೇಗಿದ್ದರೂ ಮೂರನೆಯವರಾದ ಬ್ರಿಟಿಷರು ಇಲ್ಲಿಯ ರಾಜ್ಯಸೂತ್ರಗಳನ್ನು ಹಿಡಿದುಕೊಂಡಿರುವ ವರೆಗೆ ರಾಷ್ಟ್ರದಲ್ಲಿ ಶಾಂತಿ ಸೌಹಾರ್ದವನ್ನು ಸ್ಥಾಪಿಸಬಲ್ಲೆವೆಂಬುದು ಬಯಲಾಸೆಯೇ ಸರಿ ದಂಗೆ ದರೋಡೆಗಳು ಮೊಳೆತುದು ದಾಸ್ಯ ಕ್ಷೇತ್ರದಲ್ಲೇ; ಆ ಕ್ಷೇತ್ರವನ್ನು ಶುದ್ಧೀಕರಿಸಿದ ವಿನಹ ಈ ಕಂಟಕಗಳನ್ನು ನಿರ್ಮೂಲಿಸಲಾರೆವು.

ಪದ್ಯ:- ತಡೆದೊತ್ತಿದೆವು ಬಿಹಾರನು ಲೀಗಿನ | ಒಡೆತನವಿರುವಲ್ಲಿ ||
ನಡೆಯಿತೆ ನಮ್ಮಯ ಸಾಹಸ ಮಸಣಕು | ಕಡೆಯಾಯ್ತುಲ್ಲಲ್ಲಿ || ೨ ||

ನೆಹರು - ಇದಕ್ಕೆ ಪ್ರತ್ಯಕ್ಷಪ್ರಮಾಣ ಬೇಕೆ? ಬಿಹಾರಿನ ಗಲಭೆಯು ಇಡೀ ಪ್ರಾಂತ್ಯವನ್ನೇ ರಣಕಣವಾಗಿ ಮಾಡಿ ಹಬ್ಬಿದಾಗ ನಾಲ್ಕೇ ದಿನಗಳಲ್ಲಿ ಅದನ್ನು ತಡೆಗಟ್ಟಿ ಶಾಂತಿ ಸ್ಥಾಪಿಸಲು ನಮ್ಮಿಂದ ಸಾಧ್ಯವಾಯಿತು. ಆದರೆ ಲೀಗಿನ ಸರಕಾರ ಮತ್ತು ಮುಸ್ಲಿಂ ಬಹು ಸಂಖ್ಯೆಯುಳ್ಳ ಬಂಗಾಳ, ಪಂಜಾಬು, ಗಡಿನಾಡು ಪ್ರಾಂತ್ಯಗಳಲ್ಲಿದ್ದ ದಂಗೆ ದಾವಾನಲನನ್ನು ಹತೋಟಿಗೆ ತರಲು ನಾವೆಷ್ಟೇ ಒದ್ದಾಡಿದರೂ ನಮ್ಮಿಂದಾಯಿತೆ? ಎಲ್ಲವೂ ಸ್ಮಶಾನಸದೃಶವಾಗಿ ಹೋಯಿತಲ್ಲಾ! ನಮ್ಮ ಇಂದಿನ ನಿಸ್ಸಹಾಯಕ ಸ್ಥಿತಿಗೆ–ನಮ್ಮ ಹತೋಟಿಯೊಳಗಿರದ ವಾತಾವರಣವು ನಮ್ಮ ಕೈಕಟ್ಟಿಸಿರುವ ದುರ್ಗತಿಗೆ- ಬೇರೆ ನಿದರ್ಶನ ಬೇಕೆ?

ಪದ್ಯ:–ಎಲ್ಲಿ ಆಂಗ್ಲೇಯರೊ ಅಲ್ಲಿಯೆ ಗಲಭೆಯು | ಒಲ್ಲದ ಭಾಗವನು ‖ ನಿಲ್ಲಿಸಿಕೊಳುವಂತಿಲ್ಲೆಂದಿಹೆವಿದ | ಸಲ್ಲಿಸಬೇಕಿನ್ನು ‖ ೩ ‖

ನೆಹರು—ಬಂಧುಭಗಿನಿಯರೇ. ಅಂಗೈ ನೋಡುವರೆ ಕನ್ನಡಿ ಬೇಕಿಲ್ಲ ತಾನೆ? ಎಲ್ಲಿ ಮುಸ್ಲಿಂ ಬಹುಮತವೋ ಅಲ್ಲಿಯೇ ಗಲಭೆ! ಎಲ್ಲಿ ಆಂಗ್ಲೇಯ ಅಧಿಕಾರಿಗಳಿದ್ದರೋ ಅಲ್ಲಿಯ ಗಲಭೆಯನ್ನು ಮಾತ್ರ ನಿಲ್ಲಿಸುವದಸಾಧ್ಯವಾಗುತಿತ್ತು; ಅಂತಹ ಸ್ಥಳಗಳಲ್ಲೇ ಜಾತೀಯ ದಂಗೆ ಹಬ್ಬಿಕೊಳ್ಳುತಿತ್ತು. ಇದರರ್ಥವೇನು? ಹಿಂದುಸ್ಥಾನದಲ್ಲಿ ಶಾಂತಿ ಸ್ಥಾಪನೆಯಾಗುವುದು ಬ್ರಿಟಿಷರಿಗೆ ಬೇಕಾಗಿಲ್ಲ. ಮೇಲಾಗಿ ತಾವಿನ್ನು ಹೇಗೂ ಹೊರಡತಕ್ಕವರೆಂಬ ಭಾವನೆಯಿಂದ ಅವರಿಂದೇ ಕರ್ತವ್ಯ ಪರಾಙ್ಮುಖರಾಗಿದ್ದಾರೆ. ಅಂತೆಯೇ ಮುಸ್ಲಿಂ ಬಹು ಸಂಖ್ಯೆಯುಳ್ಳ ಭಾಗಗಳಿಗೆ ಏಕ ಕೇಂದ್ರದಲ್ಲಿ ಸೇರಲಿಚ್ಛೆಯಿಲ್ಲವಾದ್ದರಿಂದ ಅವು ಉದ್ದೇಶಪೂರ್ವಕವಾಗಿ ಉರಿದೇಳುತ್ತಿವೆ. ಇಂತಹ ಸಂದರ್ಭದಲ್ಲಿ ನಾವು ವ್ಯವಹಾರಜ್ಞರಂತೆ ವರ್ತಿಸುವುದಗತ್ಯವಲ್ಲವೆ? ಕೇಂದ್ರದಲ್ಲಿ ಸೇರಲೊಪ್ಪದ ಯಾವ ಭಾಗವನ್ನೂ ಒತ್ತಾಯಿಸುವಂತಿಲ್ಲವೆಂದು ಕಾಂಗ್ರೆಸ್ಸೇ ಮಾಡಿರುವ ನಿರ್ಧಾರವಿದೆ. ನಾವಿಂದು ಅದನ್ನೇ ಜ್ಯಾರಿಗೆ ತರುವ ಜೂನ್. 3ರ ಯೋಜನೆಯನ್ನು ಸ್ವೀಕರಿಸುವ. ನೀತಿವಿದರು ನ್ಯಾಯಕರ್ತರು- ವ್ಯವಹಾರಜ್ಞರೆಂದು ಜಗತ್ತು ನಮ್ಮನ್ನು ಶ್ಲಾಘಿಸುವಂತಾಗಲಿ. ಇದೇ ನನ್ನ ವಿಜ್ಞಾಪನೆ

ಪದ್ಯ: ಕಾಣದೆ ನಿಮುಗಿದು ಇಂದಿಗು ಪಾಕಿ। ಸ್ತಾನವೆ ನಿಂತಿಹುದು ॥ ಏನಿದೆ ಹೊಸತನವೆಂದ ಪಠೇಲಭಿ। ಮಾನದಿ ಕೈಹೊಡೆದು॥೪॥

ಪಠೇಲ್—ನಾನೀ ಸೂಚನೆಯನ್ನು ಅನುಮೋದಿಸುತ್ತೇನೆ. ಹೌದು, ನಮ್ಮೆದೆ ಬಿರಿಯುತ್ತಿದೆ. ಆದರೆ ಸಾಕು; ನಾವು ಸ್ವಪ್ನ ಸಾಮ್ರಾಜ್ಯದಲ್ಲಿರುವದನ್ನು ಇನ್ನು ನಿಲ್ಲಿಸಬೇಕು. ಯಾವುದಕ್ಕಾಗಿ ಶಂಕಿಸಬೇಕು? ಪಾಕಿಸ್ತಾನವಾಗಿ ದೇಶ ತುಂಡಾಗುವದೆಂಬ ಪಶ್ಚಾತ್ತಾಪ ತಾನೆ? ಕಣ್ತೆರೆದು ವಸ್ತುಸ್ಥಿತಿಯನ್ನೊಮ್ಮೆ ನೋಡೋಣ. ಈಗಲೇ ಅಸ್ತಿತ್ವದಲ್ಲಿದೆ ಪಾಕಿಸ್ತಾನ! ಎಲ್ಲಿ ಮುಸ್ಲಿಂ ಬಹುಸಂಖ್ಯೆಯಿದೆಯೋ ಅಲ್ಲಿಯವರ ಭಾವನೆ ಮತ್ತು ವರ್ತನೆಗಳ ಮೂಲಕ ಆ ಭಾಗಗಳಲ್ಲೆಲ್ಲಾ ನಿತ್ಯ ಜೀವನದ ಸತ್ಯಸ್ಥಿತಿಯಾಗಿ 'ಪಾಕಿಸ್ತಾನ' ಸಜೀವವಿದೆ- ಅಂದಮೇಲೆ ಜೂನ್ 3ರ ಘೋಷಣೆಯ ಪರಿಣಾಮವಾಗಿ ಈ ವಿಪತ್ತು ಇನ್ನು ಹುಟ್ಟಬೇಕೆಂದಿಲ್ಲ. ಅದೀಗಲೇ ರೂಪುಗೊಂಡಿದೆ. ಸಾಮಾನ್ಯ ಪೇದೆಯಿಂದಾರಂಭಿಸಿ ದೊಡ್ಡ ಅಧಿಕಾರಿಯ ವರೆಗಿನ ಎಲ್ಲಾ ಮುಸ್ಲಿಮರ ಹೃದಯದಲ್ಲೂ ಅದಿಷ್ಟರಲ್ಲೇ ಕೆತ್ತಲ್ಪಟ್ಟಿದೆ. ಇದು ನಮ್ಮ ಸ್ವಾನುಭವದ ಮಾತು.

ಪದ್ಯ:—ಹೆದರಿಕೆಯೆಂಬುವ ಶಬ್ದವೆ ನಮ್ಮಯ। ಪದಕೋಶದೊಳಿರದು ॥ ಕದನದುರಿಗೆ ನಿರ್ಗತಿಕರು ಬೇಯುವ। ರೆದೆ ಕರಗುತ್ತಿಹುದು॥೫॥

ಪಠೇಲ್—ಬಂಧುಭಗಿನಿಯರೇ; ಕಾಂಗ್ರೆಸ್ ಕಾರ್ಯಕಾರೀ ಸಮಿತಿಯು ಹೆದರಿ ದೇಶವಿಭಜನೆಗೊಪ್ಪಿತೆಂಬ ಸಂದೇಹವನ್ನು ಬಿಟ್ಟುಬಿಡಿ 'ಭಯ'ವೆಂಬೆರಡಕ್ಷರಗಳ ಪದ ನಮ್ಮ ಶಬ್ದಕೋಶದಲ್ಲೇ ಇಲ್ಲ. ಜಗತ್ತಿನ ಅಗ್ರಗಣ್ಯ ಸಾಮ್ರಾಜ್ಯದ ಗುಂಡು, ಲಾಠಿ, ಕುದುರೇಗೊರಸುಗಳಿಗೆ ನಗುತ್ತಾ ತಲೆಕೊಟ್ಟ ಸಂಸ್ಥೆ ಕಾಂಗ್ರೆಸು. ರಾಷ್ಟ್ರಕ್ಕಾಗಿ ಪರಮಾವಧಿ ಕಷ್ಟ ನಷ್ಟಗಳನ್ನು ಸಹಿಸಿದ ರಾಷ್ಟ್ರಯೋಧರನ್ನು ಪಡೆದ ಹೆಗ್ಗಳಿಕೆ ಕಾಂಗ್ರೆಸಿನದು; ಮಾತೃಭೂಮಿಯ ಕಾಲ ಸಂಕಲೆಯನ್ನು ಕಡಿಯುವದಕ್ಕಾಗಿ ತಮ್ಮ ಕಂಠವನ್ನೇ ಪಾಶೀ ಹಗ್ಗಕ್ಕೆ ಸಿಕ್ಕಿಸಿದ ಹುತಾತ್ಮರನ್ನು ಪಡೆದ ಧನ್ಯಜೀವಿ ಸಂಸ್ಥೆ ಕಾಂಗ್ರೆಸು. ಆದರೆ ಒಂದು ವಿಷಯವು ನಿಜಕ್ಕೂ ನಮ್ಮ ಹೃದಯವನ್ನು ಕುಗ್ಗಿಸಿದೆ. ನಿರಪರಾಧಿಗಳು, ನಿಸ್ಸಹಾಯಕರು ಜಾತೀಯ ದಾವಾಗ್ನಿಯಲ್ಲಿ ಬೇಯುತ್ತಿರುವ ಆ ಅಸಹ್ಯ ದೃಶ್ಯವು

ನಮ್ಮ ತಲೆಯನ್ನು ತಗ್ಗಿಗೊತ್ತಿದೆ! ನಾವೀಗ ಅಧಿಕಾರದಲ್ಲಿದ್ದೇವಾದರೂ ಸದ್ಯಸ್ಥಿತಿಯಲ್ಲಿ ಏನನ್ನೂ ಮಾಡಲಾರದವರಾಗಿದ್ದೇವೆ. ನಮ್ಮ ಭಗಿನೀ ಬಂಧುಗಳು ಅಮಾನುಷ ಅತ್ಯಾಚಾರಗಳಿಗೆ ಬಲಿಯಾಗುತ್ತಿರುವಾಗ ನಾವು ಬಂಧನದಲ್ಲಿದ್ದಂತೆಯೇ ನಿಸ್ಸಹಾಯಕರಾಗಿದ್ದೇವೆ. ಇಂತಹ ಸ್ಥಿತಿಯನ್ನು ಇನ್ನೂ ಊರ್ಜಿತದಲ್ಲಿಡಲು ನಾವು ಸಿದ್ಧರಿಲ್ಲ.

ಪದ್ಯ:-ಹದಿನಾರನೆ ಮೇ ಘೋಷಣೆ ಹುಸಿ ಕೇಂ| ದ್ರದ ರಚನೆಯ ಮಾಡಿ॥ ಕದಡಿತು, ಕಳೆಯಿತು, ದುಃಖಿಸೆನದ ಕಿಂ | ತಿದು ಉತ್ತಮ ನೋಡಿ ॥ ೬ ॥



ಪಟೇಲ್—ರಾಷ್ಟ್ರಯೋಧರೇ. ನಾಮಮಾತ್ರವಾದ ದುರ್ಬಲ ಕೇಂದ್ರವನ್ನು ನಿರ್ಮಿಸಿ, ಸರ್ವಾಧಿಕಾರವುಳ್ಳ ಲೀಗ್ ಪ್ರಾಂತಿಕ ಪಂಗಡಗಳಿಗೆ ಮುಸ್ಲಿಮೇತರ ಭಾಗಗಳನ್ನೂ ಸೇರಿಸಿ ಇಡಿಯಿಡೀ ಪ್ರಾಂತ್ಯಗಳನ್ನೇ ಲೀಗ್ ಆಳ್ವಿಕೆಗಾಹುತಿಕೊಟ್ಟಿದ್ದ ಮೇ 16ರ ಘೋಷಣೆಯೇ ಇಷ್ಟೆಲ್ಲಾ ಅನಾಹುತಗಳಿಗೆ ಕಾರಣವಾಯಿತು. ಅದೀಗ ರದ್ದಾದುದಕ್ಕಾಗಿ ನನಗೇನೂ ದುಃಖವಿಲ್ಲ. ಮೇ 16ರ ಘೋಷಣೆಗಿಂತ ಜೂನ್ ೩ರ ವ್ಯವಸ್ಥೆಯೆಷ್ಟೋ ವಾಸಿ.

ಪದ್ಯ:-ಅನ್ಯಥ ಭಾವಿಪ ಭಾಗವು ಕೊರಳಿನ। ದೊಣ್ಣೆಯು ರಾಷ್ಟ್ರಕದೆ || ಇನ್ನಾ ತುಂಟರತಂಡಕೆ ಆಳುವ | ಬನ್ನಣೆ ತಿಳಿಯಲಿದೆ || ೭ ||

ಪಟೇಲ್–ಬಂಧುಭಗಿನಿಯರೇ ಇನ್ನು ವಸ್ತುಸ್ಥಿತಿಯನ್ನು ವಂಚಿಸಿ ಫಲವಿಲ್ಲ. ಎಲ್ಲರಿಗೂ ಮಂದಟ್ಟಾಗಿರುವ ವಿಷಯ-ಮುಸ್ಲಿಂ ಬಹು ಸಂಖ್ಯೆಯುಳ್ಳ ಭಾಗಗಳು ಎಂದೆಂದಿಗೂ ಏಕಕೇಂದ್ರದಲ್ಲಿ ಶಾಂತ ಚಿತ್ತದಿಂದಿರಲಾರವೆಂಬುದು. ಒಮ್ಮನಸ್ಸಿನಿಂದ ರಾಷ್ಟ್ರದ ಅಭಿವೃದ್ಧಿಸಾಧನಾ ಕಾರ್ಯಕ್ಕೆ ಅವೆಂದಿಗೂ ನೆರವಾಗುವಂತಿಲ್ಲ. ಇಂತಹ ಪೀಡೆಯೇ ಒಂದು ರಾಷ್ಟ್ರದ ಕೊರಳಿಗೆ ದೊಣ್ಣೆ! ಆ ಆತಂಕವೀ ಯೋಜನೆಯ ಮೂಲಕ ತಪ್ಪಿದ್ದಕ್ಕಾಗಿ ಸಂತೋಷಿಸೋಣ. ಒಂದು ವ್ಯಕ್ತಿಯಂತೆಯೇ ಒಂದು ಸಮಾಜವನ್ನೂ ಒಪ್ಪಿಗೆಯಿಂದಲ್ಲದೆ, ಒತ್ತಾಯದಿಂದ ಕೂಡಿಟ್ಟುಕೊಳ್ಳುವದಸಾಧ್ಯವೆಂಬುದನ್ನು ಯಾರೂ ಮರೆಯಬಾರದು ಆದ್ದರಿಂದ ಒಂದು ವಿವಾದ ಇಲ್ಲಿ ತೀರ್ಮಾನಗೊಂಡಂತಾಯಿತು ನಮ್ಮ ಒಂದು ಕಂಟಕ

ಈ ಮೂಲಕ ತಪ್ಪಿದಂತಾಯಿತು. ಇದು ವರೆಗೂ ಪ್ರತಿಭಟನೆಯೊಂದನ್ನೇ
ಕೂಡಿ ಅನುಭವವುಳ್ಳ ಅವರಿಗೆ-ಪಾಶವಿಕ ಆಕ್ರಮಣವನ್ನೇ ಪರಾಕ್ರಮ
ವೆಂದು ಭಾವಿಸಿಕೊಂಡವರಿಗೆ-ಅಲ್ಲಿಯ ರಾಜ್ಯ ನಿರ್ವಹಣದ ಜವಾಬ್ದಾರಿ
ಬಿದ್ದಂತೆಯೂ ಆಯಿತು; ಈ ತನಕ ಬೇಜವಾಬ್ದಾರಿಯಿಂದ ನೆಗೆಯುತ್ತಿ
ದ್ದವರು ಈ ಹೊಸ ಹೊಣೆಯ ಭಾರದಿಂದ ಅಲ್ಲೇ ನೆಲಹಿಡಿಯದಿರಲಾ
ರರು. ಹೀಗಾಗಿ ನಮಗೆ ಇದು ಎರಡು ವಿಧದ ಲಾಭವೆಂಬುದು ಎಲ್ಲರ
ಲಕ್ಷ್ಯದಲ್ಲೂ ಇರಲಿ.

ಪದ್ಯ:-(ಭಾಮಿನಿ ಷಟ್ಪದಿ)

ಇಂದು ಘಟನಾ ಸಮಿತಿಗಿಹ ನಿ | ರ್ಬಂಧ ಶರ್ತಗಳೆಲ್ಲ ಜಾರಿತು |
ಮುಂದೆ ನಮ್ಮಿಚ್ಛೆಯ ಸ್ವರಾಜ್ಯವ ರೂಪಿಸುವ ನಾವು ||

ಪಟೇಲ್—ರಾಷ್ಟ್ರಯೋಧರೇ, ಮತ್ತೊಂದು ಅತಿ ಮುಖ್ಯ ಅನು
ಕೂಲತೆ ನಮಗೀ ಮೂಲಕ ದೊರೆತಿದೆ. ಮೇ ೧೬ರ ಘೋಷಣೆಯಲ್ಲಿ
ಬ್ರಿಟಿಷ್ ಸರಕಾರವು ಹಾಕಿರುವ ಶರ್ತ ನಿರ್ಬಂಧಗಳಿಂದಾಗಿ ನಮ್ಮ
ಘಟನಾ ಸಮಿತಿಯು ಕಾರ್ಯವು ನಮ್ಮಿಚ್ಛೆಯಂತೆ ಸಾಗದ ರೀತಿಯ
ಪ್ರತಿಬಂಧಕಗಳೆಷ್ಟೋ ಇದ್ದುವು. ನಮ್ಮ ಕಾರ್ಯಕ್ಷೇತ್ರಕ್ಕೆ ಬ್ರಿಟಿಷ
ರೊಂದಲ್ಲ, ಹಲವು ಗಡಿಬೇಲಿಗಳನ್ನು ಅದರಲ್ಲಿ ಹಾಕಿದ್ದರು. ಜಾತೀ
ಯತಾ ಪ್ರಶ್ನೆ ಬರುವ ಪ್ರತಿಯೊಂದು ಸಂದರ್ಭದಲ್ಲೂ ಆಯಾ ಜಾತಿಯ
ವರ ಮೂರನೇ ಎರಡಂಶದ ಬಹುಮತವಿಲ್ಲದೆ ಯಾವ ನಿರ್ಣಯವೂ
ಆಗಕೂಡದೆಂಬ ವಿಲಕ್ಷಣ ನಿಯಮವು ಅದರಲ್ಲಿದ್ದುದರಿಂದ ನಾವು
ಯಾವ ನಿರ್ಧಾರ ಮಾಡುವದೂ ಅಸಾಧ್ಯವಾಗಿತ್ತು. ಇಂದು ಹಾಗಲ್ಲ.
ಮುಕ್ಕಾಲಂಶ ಭಾರತಕ್ಕೆ ನಾವಿಚ್ಛಿಸುವ ಮಾದರಿಯ ರಾಜ್ಯಾಂಗ ರಚನೆ
ಯನ್ನು ಯಾವ ತಡೆತೊಡಕೂ ಇಲ್ಲದೆ ನಿರಾತಂಕವಾಗಿ ಜಾರಿಗೆ ತರ
ಬಹುದು ಅಡ್ಡಗಾಲಿಡುವವರನ್ನು ಅಂಗಲಾಚುವ ದೈನ್ಯತೆಯೀಗ
ತಪ್ಪಿದೆ. ರಾಷ್ಟ್ರವನ್ನು ಪ್ರಗತಿ ಪಥದಲ್ಲಿ ಮುಂದೆ ಕೊಂಡೊಯ್ಯಲವ
ಕಾಶ ದೊರೆತಿದೆ. ಇದಕ್ಕಾಗಿ ನಾವು ಸಂತೋಷಿಸುವುದು ಬೇಡವೆ?
ತುಲನಾತ್ಮಕವಾಗಿ ನೋಡಿದರೆ ಈ ನವಯೋಜನೆಯು ಒಡ್ಡಿರುವ
ಆತಂಕಗಳಿಗಿಂತ ಅನುಕೂಲತೆಗಳೇ ಹೆಚ್ಚಿಗೆ.

ಪದ್ಯ – ಮುಂದಕಿದೆ ಸಾಹಸದಿ ಸಖ್ಯದಿ | ಒಂದುಗೂಡುವ ಯೋಗವಿದ ನಾ| ನಂದದಿಂ ಸ್ವೀಕರಿಸಿರೆನೆ, ಸಭೆಯೊಪ್ಪಿ ಚದರಿದುದು ॥ ೧ ॥

ಪಠೇಲ್– ಬಂಧುಭಗಿನಿಯರೇ; ಇಷ್ಟಿದ್ದರೂ ದೇಶವಿಭಜನೆಯಾಯಿತೆಂದು ಸಂತಾಪದಿಂದ ಕುದಿಯುವವರಿದ್ದರೆ ಅಂಥವರಿಗೆ ಆಶ್ವಾಸನೆ ಕೊಡುತ್ತೇನೆ—ನಿಮ್ಮ ಕಾಲ ಮುಂದಿದೆ; ನಿಮ್ಮ ಅನುಕೂಲ ಸಂದರ್ಭವನ್ನೂ ಇದರ ಮೂಲಕವೇ ನೀವು ಸಾಧಿಸಿಕೊಳ್ಳಬೇಕಾಗಿದೆ. ಈ ಯೋಜನೆಯು ನಮ್ಮ ಕೃತಿಯಲ್ಲ. ಬ್ರಿಟಿಷ್ ಸರಕಾರವು ಸದ್ಯಸ್ಥಿತಿಯಲ್ಲಿ ಬೇರೆ ಹಾದಿಯಿಲ್ಲವೆಂದು ಕೈಕೊಂಡಿರುವ ಸಂಧಿಜೋಡಣೆಯಿದು. ರಾಷ್ಟ್ರದ ಅಖಂಡತ್ವವನ್ನು ಸಾಧಿಶಲಿಚ್ಛಿಸುವವರಿಗೂ ಇದನ್ನು ಉಪಯೋಗಿಸಿಕೊಂಡೇ ಗುರಿಸೇರುವ ಅನುಕೂಲತೆಯಿದೆ. ಮೂರನೆಯವರಾದ ಬ್ರಿಟಿಷರು ಹೊರಟುಹೋಗಿ, ನಮ್ಮ ಸರ್ವಶಕ್ತಿಯನ್ನೂ ಸಂಘಟಿಸಿಕೊಳ್ಳುವರೆ ಅವಕಾಶವೀಗ ದೊರೆತಿರುವುದರಿಂದ ಆ ಮೂಲಕ ರಾಷ್ಟ್ರದ ಐಕ್ಯತೆಯನ್ನು ಪುನಃ ಸಂಪಾದಿಸಬಹುದು. ಬಂಧುಗಳೇ, ಯಾವ ಹೋರಾಟಕ್ಕೂ ಆಸ್ಪದ ದೊರೆಯದು; ಅಗತ್ಯ ಬೀಳದು. ಸದ್ಯದ ಕಲ್ಮಷ ವಾತಾವರಣವು ತಿಳಿಗೊಂಡು ಸದ್ಭಾವನೆ ಹೊಳೆದಾಗ, ಉದ್ವೇಗ ಮನೋವೃತ್ತಿಯಿಳಿದು ಉದ್ಯೋಗ ಪ್ರವೃತ್ತಿ ಮೂಡಿದಾಗ ರಾಷ್ಟ್ರವು ಪುನಃ ಒಂದಾಗುವುದೆಂದೇ ಕಾಂಗ್ರೆಸಿನ ನಿರೀಕ್ಷೆಯಿದೆ. ಆದ್ದರಿಂದ ಜೂನ್ 3ರ ಘೋಷಣೆಗೆ ಒಪ್ಪಿಗೆಕೊಡಬೇಕೆಂದು ನನ್ನ ಅಗ್ರಹದ ವಿನಂತಿ.

ಕೃಪಲಾನಿ – ಸಭೆಯು ಈ ಸೂಚನೆಯನ್ನು ಪ್ರಬಲ ಬಹುಮತದಿಂದೊಪ್ಪಿಕೊಂಡಿದೆ. ವಂದೇ ಮಾತರಂ.

## ದೃಶ್ಯ ೭

(ಪಾಕಿಸ್ತಾನ್ ಗವರ್ನರ್ ಜನರಲ್ ಜಿನ್ನರ ಒಡ್ಡೋಲಗ)

ಹಾಡುಗಾರ ನವಸಂಭ್ರಮದ ಸುಶೋಭಿತರು

ಜಿನ್ನಾ—ಬಹಳ ಸಂತೋಷ.

ಹಾಡುಗಾರ— ತಾವು?

ಜಿನ್ನಾ—ಸ್ವತಂತ್ರ ಸಾರ್ವಭೌಮಾಧಿಕಾರೀ ಪಾಕಿಸ್ತಾನದ ನಿಯೋಜಿತ ಗವರ್ನರ್ ಜನರಲರನ್ನು ಬಲ್ಲಿರಷ್ಟೆ?

ಹಾಡುಗಾರ—ಕಾಯಿದೇ ಆಝಾಮ್ ಮಹಮ್ಮದಾಲಿ ಜಿನ್ನಾ ಸಾಹೇಬರು.

ಜಿನ್ನಾ—ಸರಿ;

ಹಾಡುಗಾರ—ಚಿತ್ತೈಸಿದ ಕಾರಣ?

ಜಿನ್ನಾ--ಇದೆ ನವೀನ ರಾಷ್ಟ್ರವೊಂದರ ಹೊಸಚರಿತ್ರೆಯ ಪೀಠಿಕೆ ಹಾಕುವ ಮಹತ್ತಾದ ಕಾರ್ಯವೇ ನನ್ನ ಮೇಲಿದೆ. ಸಿಂಹಾಸನ ತಯಾರುಂಟಷ್ಟೆ?

ಪದ್ಯ:-(ಧಾಟಿ—ಇವಳ್ಯಾವ ಲೋಕದ ಸತಿಯೊ । ಮತ್ತೀ ।
ಯುವತಿಯ ಪಡೆದವಳೇನ್ ಪುಣ್ಯವತಿಯೊ ॥ )

ಭಳಿರೆ ಬಯಕೆ ಕೈಗೂಡಿಮುದು । ಮೂಡಿ । ವೆಳಚಂದ್ರ ಪಾಕಿಸ್ತಾನಕೆ ಝಿಂದಾಬಾದು ॥ ಪಲ್ಲ ॥ ಸರ್ವರೊಪ್ಪಿಗೆ ಬಂತು ಕಾರ್ಯ । ಭಾರ । ನಿರ್ವಹಿಸುವ ಅವಸರವನಿವಾರ್ಯ ॥ ಓರ್ವಗಿಬ್ಬದಿ ಬೇಡ ವೆಂದು । ಆದಿ । ಪರ್ವದೊಳಗ್ರಪೀಠಕೆ ಜಿನ್ನ ಬಂದು ॥ ೧ ॥

ಜಿನ್ನಾ—ಭೇಷ್! ನನ್ನ ಕನಸು ನನಸಾಯಿತು; ಕಾರ್ಯ ಕೈಗೂಡಿತು. ನಾನು ಮುಸ್ಲಿಂ ಲೀಗಿನಿಂದ ಮೌಂಟ್‌ಬೇಟನ್ ಯೋಜನೆಯ ಅಂಗೀಕಾರ ನಿರ್ಧಾರವನ್ನು ಮಾಡಿಸಿದ ದಿನ್ನಲ್ಲೀ ಅಖಿಲ ಭಾರತ ಕಾಂಗ್ರೆಸ್ ಸಮಿತಿಯೂ ಅದನ್ನಂಗೀಕರಿಸಿದೆ. ಅಲ್ಲಿಗೆ ಪಾಕಿಸ್ತಾನವು ಪ್ರಶ್ನಾತೀತವಾಯಿತು ಆ ಮೇಲೆ ದ್ವಿರಾಷ್ಟ್ರ ನಿರ್ಮಾಣ ಕಾರ್ಯಗಳು ಅವಸರದಿಂದ ಸಾಗಹತ್ತಿದಾಗ, ಎರಡೂ ಕಡೆಗಳಿಗೆ ಓರ್ವನೇ ಗವರ್ನರ್ ಜನರಲ್ ಸದ್ಯಕ್ಕಿರಲೆಂಬಾತುರವನ್ನು ಬ್ರಿಟಿಷ್ ಸರಕಾರವೂ ಕಾಂಗ್ರೆಸಿಗರೂ ಪ್ರದರ್ಶಿಸಿದರು ಆದರೆ ಪೂರ್ಣ ತುಂಡಾಗಿ ಹೋಗತಕ್ಕ ಎರಡು ರಾಷ್ಟ್ರಗಳಿಗೆ ಇದೊಂದು ದಾರದ ಜೋಡಣೆಯಾದರೂ ಯಾಕೆ ಬೇಕು? ನನ್ನ ಲೀಗು, ಪಾಕಿಸ್ತಾನಕ್ಕೆ ಪ್ರತ್ಯೇಕ ಗವರ್ನರ್ ಜನರಲ್ ಬೇಕೆಂದು ಕೇಳಿ ಅದನ್ನೂ ಪಡೆದಿದೆ! ನಾನೇ ಈಗ ಪಾಕಿಸ್ತಾನದ ಗವರ್ನರ್ ಜನರಲ್‌ನಾಗಿ ನೇಮಕಗೊಂಡಿದ್ದೇನೆ

ಪದ್ಯ— ಅರರೆ ಗೆದ್ದುದು ಪಂಥವಿಂದು । ಗವ | ರ್ನರ ಜನರಲ ಪೀಠ ದೊರಕಿತು ಮುಂದು || ಪರಿಪೂರ್ಣವಾಯ್ತೆನ್ನ ಕೆಲಸ | ಭಾರ ಹೊರಲೇ ಬೇಕಿನ್ನೆಂದ ಜಿನ್ನಾ ಲೀಗರಸ || ೨ ||

ಜಿನ್ನಾ— ಭಳಿರೇ ಶಹಭಾಸ್. ಚರಿತ್ರಾರ್ಹವಾದ ಎರಡನೇ ಮಹಾವಿಜಯವನ್ನು ಗಳಿಸಿಕೊಂಡೆ. ವೈರಿಗಳಿಗೆ ಸೂಜೀಮೊನೆಹೊಗಿಸುವಷ್ಟು ದುರ್ಬಲ ಭಾಗ ಕೂಡಾ ದೊರೆಯದಂತಹ ಅಭೇದ್ಯ ಮುಸ್ಲಿಂ ಒಕ್ಕಟ್ಟನ್ನು ನಿರ್ಮಿಸಿ ಪಾಕಿಸ್ತಾನ್ ಸಂಪಾದಿಸಿಕೊಂಡುದು ನನ್ನ ಪ್ರಥಮ ವಿಜಯವಾಗಿದ್ದರೆ, ಆ ಪಾಕಿಸ್ಥಾನದ ಗವರ್ನರ್ ಜನರಲ್ ಆಗಿ ನಾನೇ ನೇಮಕವಾದುದು ನನ್ನ ದ್ವಿತೀಯ ವಿಜಯ. ಇದೀಗ ನನ್ನ ನಿಶ್ಚಲ ಧೋರಣೆಯು ಹತ್ತಿನಿಂತ ಎರಡನೇ ಜಯಾಂತಸ್ತು. ಹಿಂದುಸ್ಥಾನಕ್ಕೆ ಲೋರ್ಡ್ ಮೌಂಟ್‌ಬೇಟನರೇ ಗವರ್ನರ್ ಜನರಲ್ ಆಗಿರುವಾಗ ನನ್ನ ಪಾಕಿಸ್ತಾನಕ್ಕೆ ನಾನೇ ಅಧಿಕಾರಿಯಾದೆ. ಹಿಂದೀಯನೊಬ್ಬನಿಗೆ ದೊರೆತ ಪ್ರಥಮ ಗವರ್ನರ್ ಜನರಲ್ ಹುದ್ದೆಗೇರಿ, ಚರಿತ್ರೆಯಲ್ಲೊಂದು ಹೊಸ ದಾಖಲೆ ನಿರ್ಮಿಸಿದೆ. ಇನ್ನು ಮುಂದಿನ ಕಾರ್ಯದತ್ತ ಕಣ್ಣಿಡಬೇಕಾಯಿತು.

ಪಧ್ಯ— ಹೊಣೆ ದೊಡ್ಡದಿದು ಕಾರ್ಯ ಕಠಿಣ । ಅವ । ಗುಣವನೆ ತೋರಿಸಿ ಹಳಿಯುವರೆನ್ನ || ಸೆಣಸು ಮುನಿಸು ದ್ವೇಷ ಸಾಕು | ಜನ । ಮನವ ರಂಜಿಸಿ ಶಂಕೆ ಬಿಡಿಸಲೆಬೇಕು || ೩ ||

ಜಿನ್ನಾ— ಸರಿ. ಇದುವರೆಗೆ ಹೋರಾಡಿ ಪಾಕಿಸ್ತಾನ ಸಂಪಾದಿಸಬೇಕಾಗಿದ್ದುದರಿಂದ ಮುಸ್ಲಿಂ ಜನಾಂಗದ ಆವೇಶ, ಆಕ್ರೋಶಗಳನ್ನು ಹುರಿದುಂಬಿಸಿಬಿಟ್ಟಿದ್ದೆ, ಆದರಿನ್ನು ಹಾಗಲ್ಲ. ಪಾಕಿಸ್ತಾನ್ ರಾಜ್ಯನಿರ್ವಹಣದ ಮಹತ್ತಾದ ಹೊಣೆಗಾರಿಕೆ ನನ್ನ ತಲೆಯ ಮೇಲೆ ಬಿದ್ದಿದೆ. ಬಹುಸಂಖ್ಯಾಕರಾದ ನಮ್ಮ ಪ್ರತಿ ಪಕ್ಷೀಯರು ನಮ್ಮ ದೋಷಗಳನ್ನಷ್ಟೆ ಭೂತಕನ್ನಡಿಯಲ್ಲಿಟ್ಟು ತೋರಿಸಿ ನನ್ನನ್ನೂ ಲೀಗ್ ಚಳವಳವನ್ನೂ ಅತ್ಯಂತ ಕುರೂಪಗೊಳಿಸಿ ಚಿತ್ರಿಸುತಿದ್ದಾರೆ. ಇಡೀ ಲೋಕದ ನ್ಯಾಯದೃಷ್ಟಿಯ ಉಗ್ರ ನೋಟವೇ ನಮ್ಮ ಮೇಲೀಗ ಬಿದ್ದಿದೆ- ಬಲ್ಲೆ; ಸರಿಯಾಗಿ ಗೊತ್ತಿದೆ! ನಾವು ಹೊಣೆ ನಿರ್ವಹಿಸುವ ರೀತಿಯನ್ನು ದುರುದ್ದೇಶ

ಪೂರ್ವಕವಾಗಿ ಪಕ್ಷೇದಾರೀ ದೃಷ್ಟಿಯಿಂದ ಪರೀಕ್ಷಿಸುವವರು ನಮ್ಮ ಸುತ್ತಲೂ ಆವರಿಸಿದ್ದಾರೆ. ಇಂತಹ ಸಂದರ್ಭದಲ್ಲಿ ನಮ್ಮ ಮೇಲಿರುವ ಜವಾಬ್ದಾರಿ ಅತಿ ದೊಡ್ಡದು. ನ್ಯಾಯಕ್ಕೆ ಸಮ್ಮತವಾಗುವಂತೆ, ನಾಗರಿಕ ಪ್ರಪಂಚವೇ ಶಹಬಾಸ್ ಕೊಡುವಂತೆ, ಎಲ್ಲರ ಶಂಕೆ ಸಂದೇಹಗಳನ್ನೂ ನಿವಾರಿಸಿ ಜನಮನರಂಜಿಸುವ ಕೆಲಸ ನನ್ನದು. ನಿರ್ಮಿಸಿದ ಪಾಕಿಸ್ತಾನವನ್ನು ಭದ್ರಪಡಿಸಬೇಕಾಗಿದೆ; ಬರೆದ ಚಿತ್ರಕ್ಕೆ ಬಣ್ಣ ಬಳಿದು ತೋರಿಸಬೇಕಾಗಿ ಬಂದಿದೆ.

ಪದ್ಯ—ಕಡಿಮೆ ಸಂಖ್ಯಾಕರ ಜೀವ । ಆಸ್ತಿ । ಯೊಡವೆ ಸಂಸ್ಕೃತಿ ಹಕ್ಕೆಗೀವೆನಭಯವ ‖ ಒಡೆತನರಾಧೀನರಾಗಿ । ಹಿಂದೀ । ಕಡೆ ಮುಸ್ಲಿಮರು ಶಾಂತಿಪಥದಲ್ಲೇ ಹೋಗಿ ‖ ೪ ‖

ಜಿನ್ನಾ—ಕೇಳಿರಿ: ಪಾಕಿಸ್ತಾನದಲ್ಲಿ ಎಲ್ಲಾ ಅಲ್ಪ ಸಂಖ್ಯಾಕ ಸಮಾಜಗಳವರ ಪ್ರಾಣ, ಆಸ್ತಿ, ಸೊತ್ತು, ಸಂಸ್ಕೃತಿ, ಧರ್ಮ, ಮತ್ತೆಲ್ಲಾ ವಿಧದ ವ್ಯಕ್ತಿ ಸ್ವಾತಂತ್ರ್ಯಗಳಿಗೆ ಪೂರ್ಣ ರಕ್ಷಣೆಯಿದೆ ಎಂದು ಈ ಮೂಲಕ ಕಂಠೋಕ್ತ ಭರವಸೆ ಕೊಡುತ್ತೇನೆ ಅವರಿಗೆ ಸರ್ವ ವಿಧದ ನಾಗರಿಕ ಹಕ್ಕುಗಳೂ ಕೊಡಲ್ಪಡುವವು- ಆದರೆ ಅವರು ತಮ್ಮ ರಾಜ್ಯಕ್ಕೆ, ಪಾಕಿಸ್ತಾನ್ ಸರಕಾರಕ್ಕೆ, ವಿಧೇಯರಾಗಿರಬೇಕು ಈ ನೀತಿಯು ಹಿಂದೀ ಕೇಂದ್ರದಲ್ಲಿ ಅಲ್ಪ ಸಂಖ್ಯಾಕರಾಗಿರುವ ಮುಸ್ಲಿಮರಿಗೂ ಅನ್ವಯಿಸುತ್ತದೆ. ಹಿಂದುಸ್ಥಾನದಲ್ಲಿರುವ ನನ್ನ ಮುಸ್ಲಿಂ ಬಂಧುಗಳೇ; ಅಲ್ಲಿಯ ಸರಕಾರದ ಶಾಸನಾಧೀನ ಪ್ರಜೆಗಳಾಗಿ, ರಾಜ್ಯವಿಧೇಯ ನಾಗರಿಕರಾಗಿ ಬಾಳುವುದು ನಿಮ್ಮ ಕರ್ತವ್ಯವಿದೆ- ಒಳಗಡೆಯಲ್ಲಿದ್ದು ಕೊಂಡು, ಅಲ್ಪ ಸಂಖ್ಯಾಕರೆಂಬ ನೆವನದಿಂದ ತನ್ನ ಕಾರ್ಯಗಳಿಗೆ ಅಡ್ಡಗಾಲಿಡುವ ಯಾರನ್ನಾದರೂ ಯಾವ ಸರಕಾರವೂ ಕ್ಷಮಿಸಲಾರದು. ಒಳಗಿನಿಂದ ನಡಿಸುವ ದ್ರೋಹವನ್ನು ಯಾವ ಸರಕಾರವೂ ಸಹಿಸಲಾರದೆಂಬುದು ನಿಮ್ಮ ನೆನಪಿನಲ್ಲಿರಲಿ. ಕಾದಾಡಿ ಕಾರ್ಯ ಸಾಧಿಸಿಕೊಳ್ಳುವ ಅಂಶವಿನ್ನೇನೂ ಇಲ್ಲ. ಎರಡೂ ದೇಶಗಳೊಳಗಿರುವ ಎಲ್ಲರೂ ತಂತಮ್ಮ ಸರಕಾರಕ್ಕಾಧೀನರಾಗಿ, ರಾಷ್ಟ್ರಭಕ್ತ ಪ್ರಜೆಗಳಾಗಿ, ಶಾಂತ ಜೀವನ ಸಾಗಿಸುವುದೊಂದೇ ಈಗಿನ ಕರ್ತವ್ಯವಿದೆ.

ಪದ್ಯ;-ಎರಡು ಸ್ಥಾನಗಳೊಳು ಸಖ್ಯ । ಪರ । ಸ್ಪರ ಸಹಕಾರವಿರಲೆ ಬೇಕು ಮುಖ್ಯ ॥ ಒರೆದಿದೆ ನಮ್ಮ ಕುರಾನು । ಯಾರು । ಅರಿಯದ ಜನ ರಾಜ್ಯಭಾರ ನೀತಿಯನು ॥ ೫ ॥

ಜಿನ್ನ-ಎಲ್ಲರೂ ಆಲಿಸಬೇಕು. ಹಿಂದುಸ್ಥಾನ ಮತ್ತು ಪಾಕಿಸ್ತಾನಗಳು ಪರಸ್ಪರ ಮೈತ್ರಿಯಿಂದಿರುವದು ಲೋಕ ಕಲ್ಯಾಣಕ್ಕೂ ಸ್ವತಃ ಆವೆರಡು ರಾಷ್ಟ್ರಗಳಿಗೂ ಅತ್ಯಾವಶ್ಯವಿದೆ. ಪಾಕಿಸ್ತಾನದ ಧೋರಣೆಯೇ ನಿರಬಹುದೋ ಎಂಬ ಸಂದೇಹದಿಂದ ಏನೇನೋ ಅಪಾರ್ಥ ಕಟ್ಟುತ್ತಿರುವ ಸರ್ವರೂ ಸ್ಪಷ್ಟವಾಗಿ ತಿಳಿದಿರಲಿ; ಇಂದಿಗೆ ಸಾವಿರ ವರುಷಗಳಿಗೆ ಮೊದಲು-ಈಗ ಪ್ರಜಾಪ್ರಭುತ್ವದ ಕುರಿತು ತಲೆತುಂಬ ಹರಟೆ ಮಾತು ಕೇಳಿಬರುತ್ತಿದೆಯಾದರೂ, ಈ ತತ್ವದ ಪರಿಚಯವೇ ಲೋಕಕ್ಕಿರದ ಆ ಕಾಲದಲ್ಲೇ-ಪ್ರಜಾಪ್ರಭುತ್ವವನ್ನು ಸಾರಿದ್ದಿತು ನಮ್ಮ ಪವಿತ್ರ ಕುರಾನು! ನಾವು ನಮ್ಮ ರಾಜ್ಯದಲ್ಲಿ ಅದನ್ನೇ ಅಕ್ಷರಶಃ ಜಾರಿಗೆ ತರುವೆವೆಂದೂ, ನಮ್ಮ ಧರ್ಮಬೋಧೆಯಂತೆ ಸರ್ವಸಮಾನತೆಯನ್ನು ಸಾಧಿಸುವೆವೆಂದೂ ಈ ಮೂಲಕ ಎಲ್ಲರಿಗೂ ಭರವಸೆ ಕೊಡುತ್ತೇನೆ. ಗತಕಾಲದ ಕಹಿ ಅನುಭವವೆಲ್ಲವನ್ನೂ ಮರೆತು ಭವಿಷತ್ಕಾಲದ ಸುಖಕ್ಕಾಗಿ ಎಲ್ಲರೂ ಸೌಹಾರ್ದತೆಯಿಂದಿರೋಣ. ಶಾಂತ ವಾತಾವರಣ ನಿರ್ಮಿಸೋಣ. ಪಾಕಿಸ್ತಾನ್ ಚಿರಾಯುವಾಗಲಿ.

ಪದ್ಯ:-(ವಾರ್ಧಿಕ್ಯ ಷಟ್ಪದಿ)

ಜಗದೊಳೈದನೆಯ ಅತಿದೊಡ್ಡ ರಾಷ್ಟ್ರವು ಸರ್ವ । ಬಗೆಯ ಇಸ್ಲಾಮು ರಾಜ್ಯಗಳಲೊಂದನೆ ದೇಶ । ವಗೊ ಮೂಡುತಿಹುದದರ ಉದ್ಘಾಟನೆಯ ಮಾಳ್ಪೆನೆಂದು ಹೊರಟನು ಜಿನ್ನನು ॥

ಜಿನ್ನ — ಹಿಂದುಸ್ಥಾನಕ್ಕೆ ನನ್ನ ವಿದಾಯ ಸಂದೇಶಗಳು; ಅದಕ್ಕೆ ಕಲ್ಯಾಣವಾಗಲಿ, ಎನ್ನುತ್ತೇನೆ. ಲೋಕದ ದೊಡ್ಡ ರಾಷ್ಟ್ರಗಳಲ್ಲಿ ಐದನೆಯದಾದ--ಜಗತ್ತಿನ ಇಸ್ಲಾಂ ರಾಷ್ಟ್ರಗಳಲ್ಲಿ ಅತ್ಯಂತ ದೊಡ್ಡದಾದ— ಪಾಕಿಸ್ತಾನದ ಉದಯ ಮುಹೂರ್ತ, ಅಗೋಸ್ತು ತಾ. 15, ಬರುತ್ತಿದೆ. ಆ ಸ್ವತಂತ್ರ ಸಾರ್ವಭೌಮಾಧಿಕಾರೀ ನವರಾಷ್ಟ್ರದ ಉದ್ಘಾಟನೆಯನ್ನು

ಮಾಡಲು ಕರಾಚಿಗೆ ಹೊರಡುತ್ತೇನೆ. ಸರ್ವರಿಗೂ ಶುಭವಾಗಲಿ ಪಾಕಿಸ್ತಾನ್ ಝಿಂದಾಬಾದ್!

(ಸ್ವರಾಜ್ಯ ಒಡ್ಡೋಲಗ 15—8—47 ನವದಿಲ್ಲಿ)

ಪದ್ಯ:-ಒಗೆದು ಕೈಕಾಲ ಶೃಂಖಲೆಯ ಭಾರತಮಾತೆ | ಸೊಗಸಿದಳು ಸ್ವಾತಂತ್ರ್ಯ ಸಭೆ ಸೇರಿದುದು ದಿಲ್ಲಿ | ನಗರದಲಗೋಸ್ತು ಹದಿನೈದು ನಲ್ವತ್ತೇಳರಲಿ ಸ್ವರಾಜ್ಯವು ಮೂಡಿತು ॥ ೧ ॥

ನೆಹರು—ಭಾರತಮಾತಾಕೀ ಜೈ! ಜೈ ಹಿಂದ್! ಇಂದಿಗೆ ನಮ್ಮ ಜನ್ಮ ಸಾರ್ಥಕ. ಭಾರತಮಾತೆಯೀ ಮುಹೂರ್ತದಿಂದ ಸ್ವತಂತ್ರಳು ಸ್ವಾತಂತ್ರ್ಯವನ್ನು ಸ್ವಾಗತಿಸಿ ಆವಾಹನೆ ಮಾಡಿಕೊಳ್ಳುವದಕ್ಕಾಗಿ ನವದಿಲ್ಲಿಯಲ್ಲಿ ಘಟನಾಸಮಿತಿಯು ಸಭೆ ಸೇರಿಸಿ ನಿಶ್ಚಿತ ಸುಮುಹೂರ್ತ 1947ನೇ ಆಗೋಸ್ತು 15 ಹಿಡಿಯುವ ಮಧ್ಯರಾತ್ರಿ 12 ಘಂಟೆ ಕಳೆದು ಮಿನಿಟಾಗುವಾಗ ಸ್ವಾಧಿಕಾರವನ್ನು ಸ್ಥಾಪಿಸಿಕೊಂಡಂತಾಯಿತು! ಅಖಿಲ ಭಾರತವಿಂದು ಸ್ವರಾಜ್ಯ ಸಂಭ್ರಮದಿಂದ ಧುಮುಧುಮಿಸುತ್ತಿದೆ! ಜನ್ಮಸಿದ್ಧ ಹಕ್ಕಾದ ಸ್ವಾತಂತ್ರ್ಯವು ಈಗ ತಾನೇ ದೊರೆತ-ನವಜೀವ ಬಂದ-ಭಾರತಮಾತೆ ಇಂದು ಲೋಕ ಕಲ್ಯಾಣಕಾರಿ ಸುಮಂಗಲೆಯಾಗಿ ರಾಜಿಸುತಿದ್ದಾಳೆ. ದೀರ್ಘಾವಧಿಯ ನಮ್ಮ ಬಯಕೆಯಿಂದು ತಾನೇ ಫಲಿಸಿತು! ಪ್ರಾಣ ಸಮೇತ ನಮ್ಮ ಸರ್ವಸ್ವವನ್ನೂ ಪಣವಾಗಿಟ್ಟು ಆಡಿದ ಅದೃಷ್ಟದ್ಯೂತದಲ್ಲಿ ಈಗತಾನೇ ಗೆದ್ದೆವು ಹೆಚ್ಚೇನು? ಈ ಮುಹೂರ್ತದಿಂದಲೇ ನಾವು ನಿಜಮನುಷ್ಯರು! ಜೈ ಸ್ವತಂತ್ರ ಭಾರತಮಾತಾ!

ಪದ್ಯ:-(ಧಾಟಿ-ತೂಗುವೆ ತೊಟ್ಟಿಲ ಜೋಗುಳ ಹಾಡಿ)

ಜಯಜಯ ಸ್ವಾತಂತ್ರ್ಯ ಪಡೆದ ಭೂತಾಯಿ|ಜಯಜಯ ಭಾರತಿ ಕಲ್ಯಾಣದಾಯಿ ॥ ಪಲ್ಲ ॥ ಜೈ ಜೈ॥ಧಿಟ್ಟಸಿಪಾಯಿ ಹೋರಾಟದ ದಿನದಿ | ಕ್ವಿಟ್ಇಂಡಿಯಾ ತನಕವು ಕಾದಿಕಾದಿ ॥ ಪಟ್ಟ ಸಾಹಸ ಕಷ್ಟಕೀದಿನ ವಿಜಯ | ಹುಟ್ಟಿತು ನಮಗಿದು ಸಂತೋಷ ಸಮಯ ॥ ೧ ॥ ಜೈಜೈ ।

ನೆಹರು—ವಂದೇ ಮಾತರಂ. ಸ್ವತಂತ್ರ ಭಾರತಮಾತಾಕಿ ಜೈ; ಸ್ವತಂತ್ರ ಭಾರತಮಾತಾಕಿ ಜೈ- ಸ್ವತಂತ್ರ ಭಾರತಮಾತಾಕೀ ಜೈ!

ನಾವು ಧನ್ಯರು; 40 ಕೋಟಿ ಹಿಂದೀಯರಿಂದು ಧನ್ಯರು. ನಮ್ಮ ದೇಶ ವಿಂದಿನಿಂದ ಸ್ವತಂತ್ರ; ಈ ಮುಹೂರ್ತದಿಂದ ನಾವು 40 ಕೋಟಿ ಜನಾಂಗ ಸ್ವತಂತ್ರರು ಕಳೆದ ಇನ್ನೂರು ವರುಷಗಳಲ್ಲಿ ನಮಗಿಲ್ಲದಿದ್ದ ನಮ್ಮ ಮಾನುಷತ್ವವು-ಮಾನವನ ಜನ್ಮಸಿದ್ಧ ಹಕ್ಕಾದ ಸ್ವಾತಂತ್ರ್ಯವು-ಜೈಹಿಂದ್! ಜೈ ಸ್ವತಂತ್ರ ಭಾರತಮಾತೆ!—ಈ ಕ್ಷಣದಲ್ಲಿ ನಮಗೆ ದೊರೆತಿದೆ ಈಗತಾನೇ ನಮ್ಮೆಲ್ಲದು ಆವಾಹನೆಯಾಗಿದೆ. 1845ರಲ್ಲಿ ಹಿಂದೀ ಸಿಪಾಯಿಗಳು ಹೂಡಿದ್ದ ಆ ಸಾತಂತ್ರ್ಯ ಹೋರಾಟದಿಂದಾರಂಭಿಸಿ-ಮಹಾತ್ಮಾಗಾಂಧಿಕೀ ಜೈ-ಬಾಪೂಜೀ ಮೊನ್ನೆ ತಾನೇ ಹೂಡಿದ 'ಕ್ವಿಟ್ ಇಂಡಿಯಾ' ಚಳವಳದ ವರೆಗಿನ ಹಲವು ಕಾಳಗಗಳ ಹಕ್ಕಿನ ಮಹಾ ವಿಜಯವಿಂದು ದೊರೆತಿದೆ ಮಿಲಿಯಾವಧಿ ಹುತಾತ್ಮರು, ಧೀರ ಬಂಧು ಭಗಿನಿಯರು ಅನುಭವಿಸಿದ್ದ ಕಷ್ಟ ನಷ್ಟ ತ್ಯಾಗಗಳಿಗೆ ಈಗ-ಈಗತಾನೇ-ಪ್ರತಿಫಲ ದೊರಕಿತು. ಈ ಶುಭ ಮೂಹೂರ್ತದಲ್ಲಿ-ಎಂದೆಂದಿಗೂ ಮರೆಯಲಾಗದ ಈ ಕ್ಷಣದಲ್ಲಿ--ನಮ್ಮೀ ಮಾತೃಭೂಮಿಯ ಅಪಾರಾಯುಷ್ಯ ಸಮುದ್ರದಲ್ಲೆದ್ದ ಅಮೃತಕಲಶದಂತೀಗತಾನೇ ಮೂಡಿರುವ ಈ ಮಧ್ಯರಾತ್ರಿ ಸಮುಹೂರ್ತದಲ್ಲಿ--ಈ ಸ್ವಾತಂತ್ರ್ಯಕ್ಕಾಗಿ ಹೋರಾಡಿ, ಇದನ್ನೇ ಹಂಬಲಿಸಿ ಪ್ರಾಣಾರ್ಪಣೆ ಮಾಡಿದ್ದ ನಮ್ಮ ಧೀರ ಸಹೋದರಿ ಸಹೋಧರರು ನಮ್ಮೊಂದಿಗಿರಬೇಕಿತ್ತು. ಅವರ ಆತ್ಮದ ಹಂಬಲವಾಗಿದ ಬಯಕೆಯಿಂದು ಫಲಿಸಿರುವುದರಿಂದ ಅವರ ಆತ್ಮಕ್ಕೆ ಶಾಂತಿ ದೊರೆಯಲಿ!-ಜೈಹಿಂದ್! ಜೈ ಸ್ವತಂತ್ರ ಭಾರತಾಂಬೆ!

ಪದ್ಯ:-ಪುನರವತರಿಸಿತು ಸ್ವಾತಂತ್ರ್ಯಯುಗವು || ಮಣಿವುದು ಶಿರವ ಭಾರತಿಗಿನ್ನು ಜಗವು || ಜನತಾ ರಾಜ್ಯವನ್ನಿನ್ನು ಸ್ಥಾಪಿಸಿಕೊಳುವ || ಧನದರ್ಪ ಆಶೆ ಆಕ್ರಮಗಳ ಗೆಲುವ || ೩ || ಜೈ ಜೈ ||

ನೆಹರು—ಜೈಹಿಂದ್! ಇನ್ನೀ ಸ್ವತಂತ್ರ ಭಾರತದಿದಿರಲ್ಲಿ ಗೌರವ ಭಾರದಿಂದ ಲೋಕವೇ ತಲೆ ಬಾಗಲಿದೆ. ನಮ್ಮ ಸ್ಥಾನ ನಮ್ಮದಾಯಿತು. ನಮ್ಮ ಕಳೆದುಹೋಗಿದ್ದ ಮಾನ ಕೂಡಿಬಂತು ನಮ್ಮ ಭವಿಷ್ಯ ರೂಪಿಸಿಕೊಳ್ಳುವ ಸರ್ವಾಧಿಕಾರವೂ ಈ ದಿನ ಈ ಮುಹೂರ್ತದಿಂದ ನಮ್ಮದೇ ಆಯಿತು. ಇನ್ನು ಸರ್ವಸಮಾನತಾ ರಾಜ್ಯಭಾರ ಸ್ಥಾಪಿಸೋಣ. ಅಧಿಕಾರ ಮತ್ತು ಧನಲಾಲಸೆಗಳನ್ನು ಪರದಾಸ್ಯದಂತೆಯೇ ಈ ಶುಭ

ಮುಹೂರ್ತದಲ್ಲೇ ಧ್ಯಾಡಿಸಿಕೊಳ್ಳೋಣ ಸರ್ವಸಮತಾ ಸ್ಥಾಪನೆಗೆ-ಎಲ್ಲಾ ಕೊರತೆಗಳ ನಿವಾರಣೆಗೆ ಎಲ್ಲಾ ಅನ್ಯಾಯಗಳ ಮೂಲೋತ್ಪಾಟನೆಗೆ ಈಗಿನಿಂದಲೇ ಆರಂಭಿಸೋಣ. ದಾಸ್ಯ ಕೊಳೆ ತೊಳೆದುಕೊಂಡು ನಿರ್ಮಲರಾಗಿರುವ ಈ ಮುಹೂರ್ತದಲ್ಲೇ ನಡು ಬಿಗಿಯೋಣ. ಧನ ಲಾಲಸೆ, ಅತ್ಯಾಶೆ ಆಕ್ರಮಣ ಬುದ್ಧಿಗಳು, ನಮ್ಮನ್ನು ಈಗತಾನೇ ಬೀಳ್ಕೊಂಡ ಗುಲಾಮತ್ವದೊಂದಿಗೇನೇ ಬಿಡಾರ ಕೀಳಲಿ. ನಾವು ಸ್ವತಂತ್ರರನ್ನಿಸಿದಂತೆಯೇ ಸಚ್ಚರಿತ್ರರು, ಸಮಾನರು, ಶಾಂತಿದಾತರನ್ನಿಸೋಣ. ಜೈ ಹಿಂದ್!

ಪದ್ಯ:-ಧನ್ಯತೆ ಸ್ವಾತಂತ್ರ್ಯ ಯೋಧರೆಲ್ಲರಿಗೆ । ಧನ್ಯತೆ ನವರಾಷ್ಟ್ರ ಪಿತ ಮಹಾತ್ಮನಿಗೆ ॥ ಧನ್ಯ ನೇತಾಜಿ, ಭಗತಸಿಂಗಾದ್ಯರಿಗೆ ॥ ಸನ್ನುತೆ ಮಾತೆ ಭಾರತಿಯಿನ್ನು ಬೆಳಗೆ ॥ ೩ ॥

ನೆಹರು—ನಾವೆಲ್ಲರೂ ಈ ಸ್ವಾತಂತ್ರ್ಯೋದಯದ ಇದೊಂದು ನಿಮಿಷದಲ್ಲಿ ರಾಷ್ಟ್ರದೊಡನೆಯೇ ತಾದಾತ್ಮ್ಯ ಹೊಂದೋಣ 1942ನೇ ಆಗೋಸ್ತು 8ರಲ್ಲಿ ನವಭಾರತದ ಜನಕನಾದ ವಿಭೂತಿಪುರುಷ ಮಹಾತ್ಮಾ ಗಾಂಧಿಯವರು 40 ಕೋಟಿ ಜನತೆಯ ಪರವಾಗಿ ಪರಕೀಯ ಅಧಿಕಾರಕ್ಕೆ 'ಕ್ವಿಟ್ ಇಂಡಿಯಾ' ಆಜ್ಞೆ ಕೊಟ್ಟಿದ್ದರು. ಬಾಪುಜೀಯ ಆ ಚಳವಳವು ವಿಜಯೀ ಪಂಚ ವಾರ್ಷಿಕ ಯೋಜನೆಯಾಗಿ ಇಂದು ವಿಜಯ ಮುಕುಟ ಧರಿಸಿದೆ ಆ ಶಾಪ ಬಿದ್ದು ಪೂರ್ತಿ ಐದು ವರುಷ ಒಂದು ವಾರವಾಗುವ ಈ ದಿನ ಬ್ರಿಟಿಷ್ ಆಡಳಿತೆ ಕಾಲು ಕಿತ್ತಿತು! ನಮ್ಮ ನವೀನ ಸ್ವತಂತ್ರ ಧ್ವಜವಿಂದು ಏರಿತು! ಹಾರಲಿ ನಮ್ಮ ತ್ರಿವರ್ಣ ಧ್ವಜ! ಅದರ ಪ್ರಭೆ ದಿಗ್ದೆಸೆಗಳಿಗೆ ಬೀರಲಿ. ಅದರ ನೆರಳು ಮಾನವ ಜನಾಂಗಕ್ಕಾಶ್ರಯವಾಗಲಿ. ಎಲ್ಲಾ ಪೀಡಿತರಿಗೂ, ದಳಿತರಿಗೂ, ತಂಗಾಳಿ ಬೀಸುತ್ತಾ ನಮ್ಮೀ ಧ್ವಜವು ಲೋಕದಲ್ಲೆತ್ತೆತ್ತಲೂ ಹಾರಾಡಲಿ ಇಂದಿನ-1947ನೇ ಆಗೋಸ್ತು 15ನೇ ತಾರೀಕಿನ-ಸ್ವರಾಜ್ಯವು ಉತ್ತರೋತ್ತರ ಅಭಿವೃದ್ಧಿ ಹೊಂದಲಿ; ನಾವು ನಮ್ಮ ಘಟನಾ ಸಮಿತಿಯಲ್ಲಿ ನಿರ್ಧರಿಸಿರುವ 'ಸ್ವತಂತ್ರ ಸಾರ್ವಭೌಮಾಧಿಕಾರೀ ಜನತಾ ಸರಕಾರ'ವೇ ನಾಳೆ ಬರಲಿದೆ; ಬರುತ್ತಾ ಇದೆ ಈ ರಾತ್ರಿಯ ಪೂರ್ವಾರ್ಧದೊಂದಿಗೆ ನಮ್ಮ ದಾಸ್ಯ ಕತ್ತಲೆಯೂ

ಕಳೆದಿದೆ. ನಾಳೆ ಮೂಡುವ ಪ್ರಭಾತ ಸೂರ್ಯನೊಡನೆ, ವತ್ತಾತನ ಸರಿ ಸಮಾನ ದ್ವಿತೀಯ ಬಿಂಬವೆಂಬಂತೆ ಸ್ವತಂತ್ರ ಭಾರತ ಧ್ವಜವು-ಹಸುರು ಬಿಳಿ, ಕೇಸರಿ ತ್ರಿವರ್ಣಗಳ ಮಧ್ಯೆ ಅಶೋಕ ಚಕ್ರವುಳ್ಳ ನಮ್ಮ ಅಭಿಮಾನ ಪತಾಕೆಯು-ಲೋಕಕ್ಕೆ ತನ್ನ ಪ್ರಥಮ ಬೆಳಕನ್ನು ಬೀರಲಿದೆ. ಇನ್ನೀ ಪ್ರಪಂಚ ಗಗನದಲ್ಲದಕ್ಕೆ ಶಾಶ್ವತ ಸ್ಥಾನ; ಎತ್ತರೆತ್ತರಕ್ಕೆ ಹಾರುವ ಭವಿಷ್ಯ! ಈ ಸ್ವರಾಜ್ಯ ಮಹೋದಯ ಸುಮುಹೂರ್ತದಲ್ಲಿ ಸ್ವಾತಂತ್ರ್ಯ ಹೋರಾಟ ಹೂಡಿದ್ದ—ಅವುಗಳಲ್ಲಿ ಹಲವು ವಿಧಾನಗಳಿಂದ ಭಾಗ ವಹಿಸಿದ್ದ-ಸರ್ವರಿಗೂ ಧನ್ಯವಾದಗಳು. ರಾಷ್ಟ್ರವನ್ನೆಬ್ಬಿಸಿ ಇಂದಿನ ಗುರಿ ಮುಟ್ಟಿಸಿದ ರಾಷ್ಟ್ರಜನಕ ಗಾಂಧಿಜೀಗೆ ಧನ್ಯವಾದಗಳು. ಝಾನ್ಸಿ ರಾಣಿಯ ಪಂಗ್ತಿಯ-ದಾದಾಭಾಯಿತಿಲಕರ ಸಾಲಿನ-ಭಗತ್‌ಸಿಂಗ್ ಸಮಕಾಲೀನ ಎಲ್ಲಾ ನಾಯಕರು ಹಾಗೂ ಅಜ್ಞಾತ ಸ್ವಾತಂತ್ರ್ಯ ಯೋಧರಿಗೆ, ನೇತಾಜೀಬೋಸ್ ಮತ್ತವರ ಅಜಾದ್‌ಹಿಂದ್ ಫೌಜಿಗೆ ಧನ್ಯವಾದಗಳು ಕರ್ತವ್ಯಶೀಲತೆಯಿಂದ ಸ್ವಾತಂತ್ರ್ಯವನ್ನು ಕರೆದಿತ್ತ ಬ್ರಿಟಿಷ್ ಜನತೆಗೆ, ಬ್ರಿಟಿಷ್ ಕೂಲಿಗಾರ ಸರಕಾರಕ್ಕೆ, ಅಭಿವಂದನೆಗಳಿರಲಿ. ಭಾರತೀಯರೇ, ಇನ್ನು ಮುಂದೊತ್ತೋಣ ಸರ್ವಸಮತೆ ಮತ್ತು ನ್ಯಾಯ ಸುಖ ಸಂಪೂರ್ಣತೆಯ ಸಾಧನೆಗಾಗಿ ಇನ್ನು ಎದೆಯುಬ್ಬಿಸಿಕೊಂಡು ಸಾಗೋಣ ವಂದೇ ಮಾತರಂ! ಜೈಹಿಂದ್! ಭಾರತ ಸ್ವಾತಂತ್ರ್ಯ ದೇವೀಕೀ ಜೈ!

ಪದ್ಯ:—ಜಯಜಯಜಯತಾತ್ಮ ಬಲಿದಾನಿ ಬಂಧು | ಜಯ ವೆಂದು ಮೌನದಿ ತ್ರೈಕ್ಷಣ ಸಿಂದು ॥ ಕ್ಷಯಿಸದ ಜನತಾರಾಜ್ಯವೆ ಗುರಿ ಯೆಂದು | ಬಯಸುವ ಜೈ ಭಾರತಾಂಬೆ! ಜೈಹಿಂದ್! ॥ ೬ ॥

ನೆಹರು—ನಾವಿಂದು ಯಾರ ಶ್ರಮ, ಸಾಹಸ, ಮತ್ತು ಆತ್ಮಬಲಿ ದಾನಗಳ ಪರಿಣಾಮವಾಗಿ ಈ ಮುಹೂರ್ತದಲ್ಲಿ ಸ್ವತಂತ್ರರಾಗಿರುವೆವೋ ಯಾರ ಪ್ರಾಣಾರ್ಪಣೆಯ ಪ್ರಸಾದವಾಗಿ ನಮಗೀ ರಾಷ್ಟ್ರ ಸ್ವಾತಂತ್ರ್ಯ ದೊರೆಯಿತೋ, ಆ ಹುತಾತ್ಮ ರಾಷ್ಟ್ರ ಯೋಧರೆಲ್ಲರ ಆತ್ಮಶಾಂತಿಗಾಗಿ ಈ ಸಂದರ್ಭದಲ್ಲಿ ಸರ್ವರೂ ಎದ್ದು ನಿಂತು ಮೂರು ನಿಮಿಷಗಳ ಮೌನ ವನ್ನಾಚರಿಸುವ. ಮುಂದೆ ಸರ್ವಸಮಾನತೆಯ ಜನತಾರಾಜ್ಯವೇ ನಮ್ಮ ಗುರಿಯೆಂದೂ, ಅದರ ಸಾಧನೆಗಾಗಿಯೇ ನಾವಿಂದು ಸಂಪಾದಿಸಿಕೊಂಡಿ

ರುವ ನವಚೇತನ ಮತ್ತು ಸರ್ವಾನುಕೂಲತೆಗಳನ್ನೂ ವಿನಿಯೋಗಿಸಿ, ಅವಿಶ್ರಾಂತವಾಗಿ ದುಡಿಯುವೆವೆಂದೂ ಆ ಪವಿತ್ರ ಹುತಾತ್ಮರ ಸಾಕ್ಷಿಯಾಗಿ ಪ್ರತಿಜ್ಞೆ ತೊಡೋಣ! ಜೈ ಸ್ವತಂತ್ರ ಭಾರತ ಮಾತೆ! ಜೈಹಿಂದ್!

ಮಂಗಳ ಶುಭ ಸ್ವತಂತ್ರಾಂಬೆ ಭಾರತಿಗೆ ।
ಮಂಗಳ ಜಯ ಸರ್ವಶಕ್ತ ಜನತೆಗೆ ॥
ಮಂಗಳ ಶುಭಜೈ ಹುತಾತ್ಮರೆಲ್ಲರಿಗೆ ।
ಮಂಗಳ ಶುಭಜಯಶಾಂತಿ ಸರ್ವರಿಗೆ ॥ ೭ ॥ಜೈಜೈ॥



## ಕಥೆ, ಕಾದಂಬರಿ, ನಾಟಕ, ಚಿತ್ರ, ಪ್ರಬಂಧಾದಿ ನಾನಾ ಬಗೆಯ ಪುಸ್ತಕಗಳು.

### ಕಿರಿಯರ ಪ್ರಪಂಚದ ಪ್ರಕಟಣೆಗಳು:

| | | | |
|---|---|---|---|
| ಸ್ವತಂತ್ರ ಜೀವನೋಪಾಯ | 0 | 3 | 0 |
| ಸಂಶಯ ಪಿಶಾಚಿ | 0 | 10 | 0 |
| ನಾಡಕತೆಗಳು | 0 | 4 | 0 |
| ಕುಶಲವ | 0 | 8 | 0 |
| ಕಾವ್ಯಸಾಮ್ರಾಜ್ಯ | 1 | 8 | 0 |
| ಮಧುವನ | 3 | 0 | 0 |
| ಮುಂದಿನ ದೇವರು | 0 | 4 | 0 |
| ವ್ಯಭಿಚಾರಿಣಿ ಯಾರು | 1 | 4 | 0 |
| ಹೆಂಡ್ತಿ ಗಂಡನಾದರೆ | 0 | 4 | 0 |
| ಪುರುಷ ವಧು | 0 | 4 | 0 |
| ಸನ್ಯಾಸಿಯು ಸೋಗಿನಲ್ಲಿ | 0 | 12 | 0 |
| ನಂದಾದೀಪ | 1 | 0 | 0 |
| ದೇಶಭಕ್ತ | 1 | 8 | 0 |
| ಪ್ರೇಮವಿಜಯ | 1 | 0 | 0 |
| ರಂಗಭೂಮಿ | 0 | 10 | 0 |
| ಸೇವಾಪಥ | 0 | 8 | 0 |
| ನಾರೀ ಹೃದಯ | I | 8 | 0 |
| ಭಾರತೀಯ ಕಥೆಗಳು | 1 | 12 | 0 |
| ಪ್ರಕಾಶ | 2 | 8 | 0 |
| ಮೂರು ಪ್ರಹಸನಗಳು | 1 | 0 | 0 |
| ಅನ್ನದೇವರು ಮತ್ತಿತರ ಕತೆಗಳು | 1 | 0 | 0 |
| ಭಾರತದಲ್ಲಿ ಜಾತಿಭೇದ | 1 | 0 | 0 |
| ವಿಷ್ಣುವಿನ ದಶಾಪರಾಧಗಳು | 0 | 12 | 0 |
| ಆಕಾಶ ಗಂಗೆ | 2 | 4 | 0 |
| ಸ್ವಾತಂತ್ರ್ಯವೀರ ಸಾವರಕರರು | 1 | 4 | 0 |
| ಜೀವನ ಸಂಗ್ರಾಮ | 1 | 8 | 0 |
| ಕದಂಬ | 1 | 4 | 0 |
| ಕವಿತಾಕಾಮಿನಿ | 2 | 0 | 0 |
| ಸ್ವರಾಜ್ಯ ವಿಜಯ | 0 | 8 | 0 |
| ಸಪ್ತಸಾಗರ | 0 | 12 | 0 |
| ಜಮೀನ್ದಾರ | 1 | 12 | 0 |

## ಅಂತರಂಗದ ಪ್ರಕಟಣೆಗಳು:

| | | | |
|---|---|---|---|
| ಬಿರುದಾವಳಿ. | 0 | 3 | 0 |
| ಆ ಸುದ್ದಿ | 0 | 4 | 0 |
| ಹೈದರಾಬಾದ್ ವಿಜಯ | 0 | 4 | 0 |
| ಸೆರೆಯಾಳು | 0 | 7 | 0 |
| ಗಾದೆಯ ಗಾಂಧಿ | 0 | 3 | 0 |
| ಶಾಂತಿಯ ಮಡಿಲಿನಲ್ಲಿ | 0 | 3 | 0 |
| ಬಲಿಪೀಠದಲ್ಲಿ | 0 | 5 | 0 |
| ಅಗಲಿದ ಅಕ್ಕ ಸರೋಜಿನಿ | 0 | 3 | 0 |
| ನನ್ನ ಹೆಂಡತಿ | 0 | 3 | 0 |
| ಪುಣ್ಯಫಲ | 0 | 4 | 0 |
| ಸುಖದದಾರಿ | 0 | 3 | 0 |
| ಸುಕಾಂತ | 0 | 3 | 0 |
| ಪಂಚಮುಖಿ | 0 | 5 | 0 |
| ಜಾತೀಭೂತಕ್ಕೆ ಬಲಿ | 0 | 3 | 0 |
| ಜನಸೇವೆಯ ಸೋಗಿನಲ್ಲಿ | 0 | 3 | 0 |
| ನಾ ಕಂಡ ಅವಳು | 0 | 3 | 0 |
| ತ್ರಿವೇಣಿ | 0 | 3 | 0 |
| ನಿಲುವಂಗಿ | 0 | 4 | 0 |
| ಬಾಡಿಗೆಯ ಮನೆ | 0 | 3 | 0 |
| ವರ್ತಮಾನಕಾಲದ ಸಾಲ್ವರು | | | |
| ಮಹಾನುಭಾವರು | 0 | 4 | 0 |
| ದೇವರ ನಾಮ ಮತ್ತು ಸಾಧನೆ | 0 | 3 | 0 |
| ಎರಡು ಕತೆಗಳು | 0 | 4 | 0 |
| ಸರಸ–ವಿರಸ | 0 | 3 | 0 |
| ಹೃದಯೇಶ್ವರಿ | 0 | 4 | 0 |
| ವಿವಿಧ ವಿಷಯ ಕೋಶ ಭಾಗ ೧,೨ | 0 | 6 | 0 |
| ಮುಡಿಮುತ್ತುಗಳು ೧, ೨, ೩ | 0 | 12 | 0 |
| ಕುಲವಿಲ್ಲದ ಹೆಣ್ಣು | 2 | 0 | 0 |
| ತವರು ಮನೆಯಿಂದ | 0 | 4 | 0 |
| ಭಾಗ್ಯಲಕ್ಷ್ಮಿ | 1 | 4 | 0 |
| ಯುಗವಾಣಿ | 0 | 8 | 0 |
| ಸ್ತ್ರೀ ಹೃದಯ | 0 | 4 | 0 |
| ದ್ವೇಷ | 0 | 3 | 0 |
| ಎರಡು ಏಕಾಂಕ ನಾಟಕಗಳು | 0 | 4 | 0 |
| ಪ್ರಜಾಪ್ರಭುತ್ವವನ್ನು ಕುರಿತು | 0 | 8 | 0 |

| | | | |
|---|---|---|---|
| ಕಲಾವಿದನ ದಿನಚರಿ | 0 | 3 | 0 |
| ಆಧುನಿಕ ಭಾರತ | 0 | 4 | 0 |
| ಕಾಲವೇ ಬದಲಾಗಿದೆ | 0 | 4 | 0 |
| ಭಾರತದ ಸಾಹಿತ್ಯ ಕಲೆಗಳು | 0 | 4 | 0 |
| ಸ್ತ್ರೀಸ್ವಾತಂತ್ರ್ಯ ಬೇಕೆ? | 0 | 4 | 0 |
| ಹಂಬಲ | 0 | 4 | 0 |
| ಭಾರತಚಿತ್ರದ ಅಂಚೆಚೀಟುಗಳು | 0 | 3 | 0 |
| ತ್ರಿಶೂಲ | 0 | 5 | 0 |
| ಪುಸ್ತಕಪುರಾಣ | 0 | 4 | 0 |
| ಹಳ್ಳಿಯಲ್ಲಿ ನಡೆದ ನಾಟಕ | 0 | 3 | 0 |
| ನೆರೆಯ ಗಾಂಧಾರ | 0 | 3 | 0 |
| ಮಾಶಿನಯುಗದ ಮಹಾಪ್ರಭಾವ | 0 | 3 | 0 |
| ವಿಜ್ಞಾನದ ಬೆಳವಣಿಗೆ | 0 | 4 | 0 |
| ಡಾ। ಹರ್ಡೀಕರ್ | 0 | 5 | 0 |
| ತೆಂಗಿನ ತವರು | 0 | 6 | 0 |
| ಪ್ರಾಯಶ್ಚಿತ್ತ | 0 | 3 | 0 |
| ಪ್ರಭಾ | 0 | 3 | 0 |
| ಶವಗಳ ಸಾಗಾಟ | 0 | 12 | 0 |
| ಸ್ವಪ್ನಲೋಕ | 0 | 6 | 0 |
| ಮನೆಹೊರಗಿನಮಹಾಜೀವಿಗಳು | 0 | 5 | 0 |
| ಘಂಟಮಾರಾ ೪ಭಾಗಗಳು | 2 | 0 | 0 |
| ಮಾರ್ಪಾಟ | 0 | 5 | 0 |
| ಭಾರತದ ರಾಷ್ಟ್ರಗೀತ | 0 | 3 | 0 |
| ನಮ್ಮ ಬಹು ದೊಡ್ಡ ಶತ್ರು | 0 | 4 | 0 |
| ಕೈಲಾಸ | 0 | 3 | 0 |
| ಚೌತಿ | 0 | 4 | 0 |
| ಕತ್ತು ಕೊಯ್ದವರಾರು? | 0 | 6 | 0 |
| ಸಮಾಜದ ಅಗ್ನಿಕುಂಡ | 0 | 4 | 0 |
| ಬೆಳ್ಳಿಹಬ್ಬ | 0 | 4 | 0 |
| ಉಷಾ | 0 | 4 | 0 |
| ವಿಧಿಲೀಲೆ | 0 | 4 | 0 |
| ಪರಮಾಣು ಪ್ರಪಂಚ | 0 | 4 | 0 |
| ನೀತಿ ವಿನೋದ ಕತೆಗಳು | 0 | 12 | 0 |
| ಸಾಹಸ ಭೀಮ ವಿಜಯ | 0 | 8 | 0 |
| ಭಾರತದ ಗುರುಕುಲ | 0 | 6 | 0 |
| ಅತ್ತ ಪಗಡೆ | 0 | 6 | 0 |

| | | | |
|---|---|---|---|
| ಸೇವಾಪಥ | 0 | 8 | 0 |
| ಭರತೇಶ ದಿಗ್ವಿಜಯ | 0 | 8 | 0 |
| ಮನೋಪದೇಶ | 0 | 8 | 0 |
| ಜೀವನ ಕಲೆ | 0 | 10 | 0 |
| ಪ್ರತಿಜ್ಞಾ ಪೂರ್ತಿ | 0 | 12 | 0 |
| ಮಿತ ಸಂತತಿ | 0 | 6 | 0 |
| ಗುಪ್ತರೋಗ ನಿವಾರಣೆ | 0 | 8 | 0 |
| ಸೌಂದರ್ಯ | 0 | 5 | 0 |
| ಸುಧಾ | 0 | 8 | 0 |
| ವಸಂತಕಾಲ | 0 | 6 | 0 |
| ನವೀನ ನಾಟಕಗಳು | 0 | 7 | 0 |
| ಪರ್ಲ್ ಎಸ್. ಬಕ್ | 0 | 7 | 0 |

## ಇತರ ಪುಸ್ತಕಗಳು

| | | | |
|---|---|---|---|
| ಮನೆಮದ್ದು | 2 | 8 | 0 |
| ನೆನಪಿಗಾಗಿ | 2 | 0 | 0 |
| ಗೀತೆಯ ಕೈಗನ್ನಡಿ | 0 | 12 | 0 |
| ಸುಲಭದಲ್ಲಿ ಇಂಗ್ಲಿಷ್ | 2 | 0 | 0 |
| ಸರಸ್ವತಿ | 0 | 12 | 0 |
| ಪ್ರತೀಕಾರ | 0 | 8 | 0 |
| ಪ್ರೇಮ ಪ್ರವಾಹ | 0 | 8 | 0 |
| ಮುಗುಳು | 0 | 5 | 6 |
| ವತ್ಸಲಾ | 0 | 8 | 0 |
| ಶಂಬುಕ ವಧೆ | 0 | 2 | 0 |
| ವೈಯಕ್ತಿಕ ಆರೋಗ್ಯ | 0 | 2 | 0 |
| ಶಂಬುಕವಧೆ | 0 | 2 | 0 |
| ಆದರ್ಶ ಆರೋಗ್ಯಶಾಲೆ | 0 | 2 | 0 |
| ಚಿಗುರು | 0 | 8 | 0 |
| ಲೋಪಾಮುದ್ರೆ | 0 | 8 | 0 |
| ವ್ಯವಹಾರಜ್ಞಾನದರ್ಪಣ | 1 | 8 | 0 |

ಪುರಾಮರ್ಶಿಗಾರಿ